# ಭಾವನೆ – ಭಾಷೆ





ಗ್ರಂಥಕರ್ತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (84) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

www.thraithashakam.org



# ಭಾವನೆ – ಭಾಷೆ


ಗ್ರಂಥಕರ್ತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (85) ದಶ ಅಷ್ಟಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ**

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಜನವರಿ–2017

ಪ್ರತಿಗಳು : 1000 **ಬೆಲೆ. 70/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆಗಳು–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ
    ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣೆ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ
    (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ–
    ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧಿ ಬೋಧನೆ.
34. ಸುಪ್ರಸಿದ್ಧಿ ಬೋಧನೆ.
35. ಶಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಿಕೆಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು–ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು–ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ
88. ನಿನಗೆ ನನ್ನ ಲೇಖ
89. ಹಿಂದೂ ಮತದಲ್ಲಿಯೇ ಕುಲವಿವಕ್ಷ
90. ದೇವರ ಮುದ್ರೆ
91. ಯೋಹಾನ ಸುವಾರ್ತೆ
92. ಧರ್ಮಚಕ್ರ



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು– ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ಅದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.
62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
    ದೇಹಂ ಮೋಹಂ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
    ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
    ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
    ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
    ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
    ಮಹೇಂದ್ರಜಾಲ,
    ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
    (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
    ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು
     ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಶವಮು – ಶಿವಮು
119. ಧರ್ಮಚಕ್ರಮು
120. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.

**ಸೂಚನೆ :** ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಲಕ್ಷ್ಮಿನಾರಾಯಣಾಚಾರಿ**–09440556968. **ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635,
9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್.B**
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾ ನಗರ, ತೊಣಚಿಕೊಪ್ಪಲ್,
ಮೈಸೂರ್–547097
Cell : 9141109799, 9986369118

**T.V. ರಮಣ**
NGR ಲೇಔಟ್, ರೂಪೇನಾ
ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲೀಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಭಾವನೆ – ಭಾಷೆ

ಭಾವನೆಗೆ ಭಾಷೆಗೆ ಅವಿನಾಭಾವ ಸಂಬಂಧವಿದೆ. ಅಗ್ನಿಗೆ ಪ್ರಕಾಶ ವಿರುವಾಗಲೇ ಅದಕ್ಕಿರುವ ಪ್ರಕಾಶವನ್ನು ಅನುಸರಿಸಿ ಇದು ಅಗ್ನಿ ಎಂದು ತಿಳಿಯುವಂತೆ, ಭಾವನೆಗೆ ಭಾಷೆಯಿದ್ದರೇನೇ ಭಾಷೆಯನ್ನು ಅನುಸರಿಸಿ ಭಾವನೆ ತಿಳಿಯುವುದು. ಅಗ್ನಿಗೆ ಪ್ರಕಾಶ ಹೇಗೆ ಅಂಟಿಕೊಂಡಿರುತ್ತದೋ, ಹಾಗೆಯೇ ಭಾವನೆಗೆ ಭಾಷೆ ಅಂಟಿಕೊಂಡಿರುತ್ತದೆ. ಮನುಷ್ಯನಲ್ಲಾಗಲೀ, ಪ್ರಾಣಿಗಳಲ್ಲಾಗಲೀ ಭಾವನೆ ಹುಟ್ಟಿಬರುವುದು ಸಹಜ. ಜೀವವಿರುವ ಪ್ರತಿ ಪ್ರಾಣಿಗು ಗುಣ ಭಾವನೆಗಳು ತಲೆಯಲ್ಲಿ ಹುಟ್ಟುತ್ತಲೇ ಇರುತ್ತವೆ. ಹಾಗೆ ಹುಟ್ಟಿರುವ ಕೆಲವು ಭಾವನೆಗಳನ್ನು ಹೊರಗಿನವರಿಗೆ ತಿಳಿಸುವುದಕ್ಕೆ ಉಪಯೋಗಪಡುವ ವಿಧಾನವನ್ನು 'ಭಾಷೆ' ಎನ್ನುತ್ತೇವೆ. ಭಾಷೆ ಎಂದರೇ ಭಾವನೆಯ ಪ್ರಕಟನೆ ಎಂದು ತಿಳಿಯುತ್ತಿದೆ. ಭಾವನೆ ಒಂದಿದ್ದರೇ ಅದನ್ನು ಹೇಗಾದರೂ, ಎಷ್ಟು ವಿಧಗಳಾದರೂ ಪ್ರಕಟಿಸಬಹುದು. ಉದಾಹರಣೆಗೆ ಒಬ್ಬನಿಗೆ ದಾಹವಾದಾಗ ನೀರು ಬೇಕೆಂಬ ಭಾವನೆ ಅವನಲ್ಲಿ ಹುಟ್ಟುವುದು. ಆಗ ಆ ಭಾವನೆಯನ್ನು ಹೊರಗೆ ಪ್ರಕಟಿಸಿ ಇತರರಿಗೆ ತಾನು ದಾಹದಿಂದಿದ್ದೇನೆ ಎಂದು ತಿಳಿಸುವುದರಿಂದ ಆತನಿಗೆ ನೀರು ಲಭ್ಯವಾಗುವುದು, ದಾಹ ತೀರುವುದು. ಭಾವನೆ ಒಂದೇ ಆದರೂ ಭಾಷೆ ಎಷ್ಟು ವಿಧಗಳಾದರೂ ಇರಬಹುದು. "ಭಾವನೆ, ಭಾಷೆ" ವಿಧಾನವನ್ನು ತಿಳಿಸುವ ಒಂದು ಸಂಘಟನೆಯನ್ನು ವಿವರಿಸಿಕೊಳ್ಳೋಣ. ಒಂದು ಸಂಘಟನೆಯಲ್ಲಿ ನಡೆದಿರುವುದನ್ನು ನೋಡಿದರೇ ಭಾವನೆಗೆ ಅನುಬಂಧವಾಗಿರುವ ಭಾಷೆ ಹೇಗಿದೆಯೋ ತಿಳಿಯುವುದು.

ಇಬ್ಬರು ಮನುಷ್ಯರು ಒಂದು ದಾರಿಯಲ್ಲಿ ಪ್ರಯಾಣಿಸುತ್ತಾ ಹೋಗುತ್ತಿದ್ದಾರೆ. ಅವರ ಪ್ರಯಾಣ ಮಾರ್ಗದಲ್ಲಿ ಚಿಕ್ಕಕಾಡು ಇರುವುದರಿಂದ ಆ ಕಾಡಿನ ಮಾರ್ಗದ ಮೂಲಕ ಪ್ರಯಾಣಿಸುತ್ತಾ ಹೋಗುತ್ತಿದ್ದಾರೆ. ಆ ಸಮಯ ಮಧ್ಯಾಹ್ನ ಸಮಯವಾದ್ದರಿಂದ ಅವರಿಗೆ ದಾಹ ಉಂಟಾಗುವುದು ಪ್ರಾರಂಭವಾಯಿತು. ಆಗ ಅವರಲ್ಲಿ 'ನೀರು ಅವಶ್ಯ' ಎನ್ನುವ ಭಾವನೆ ಏರ್ಪಟ್ಟಿದೆ. ನೀರನ್ನು ಕುಡಿದರೇ ಅವರ ದಾಹ ತೀರುತ್ತದೆ. ಅವರಿಬ್ಬರು ಅಣ್ಣತಮ್ಮಂದಿರೇ

ಪ್ರಯಾಣಿಸುತ್ತಿದ್ದಾರೆ. ಒಬ್ಬರಿಗೆ ಓದುಬರಹ ಬರುವುದಿಲ್ಲ, ತೆಲುಗು ಭಾಷೆ ಹೊರತು ಇತರ ಭಾಷೆಗಳು ಯಾವುದೂ ತಿಳಿದಿಲ್ಲ. ತಮ್ಮನು ಓದುಬಾರದವ ನಾದರೇ ಅಣ್ಣನಿಗೆ ಓದುಬರಹ ಬರುತ್ತದೆ, ಆತನಿಗೆ ಐದು ಭಾಷೆಗಳು ಬರುತ್ತವೆ. ಅವರಿಬ್ಬರಿಗೆ ದಾಹ ಹೆಚ್ಚಾದ್ದರಿಂದ ನೀರಿಗಾಗಿ ಹುಡುಕಬೇಕೆಂದುಕೊಂಡರು. ಆಗ ಅವರಿಗೆ ಸ್ವಲ್ಪ ದೂರದಲ್ಲಿ ಒಂದು ಹುಲ್ಲಿನ ಗುಡಿಸಲು ಕಾಣಿಸಿತು. ಅಲ್ಲಿ ಮನುಷ್ಯರಿರುವಂತೆ ಕೂಡಾ ಕಂಡಾಗ, ಅಣ್ಣ ತಮ್ಮನನ್ನು ಅಲ್ಲೇ ಮರದಕೆಳಗೆ ಕೂರಿಸಿ ತಾನು ನೀರಿಗಾಗಿ ಕಾಣಿಸುವ ಗುಡಿಸಲಿನ ಹತ್ತಿರ ಹೋದನು. ಕರ್ನಾಟಕ ರಾಜ್ಯದಿಂದ ಬಂದಿರುವವರು ಚಿಕ್ಕಕಾಡಿನಲ್ಲಿ ಸ್ವಲ್ಪ ಹೊಲವನ್ನು ಶುಭ್ರಮಾಡಿ ಕೊಂಡು ಬೆಳೆಯನ್ನು ಇಟ್ಟುಕೊಳ್ಳುತ್ತಿದ್ದರು. ಅಲ್ಲಿಗೆ ಹೋದ ಮನುಷ್ಯ ಕನ್ನಡ ಭಾಷೆಯಲ್ಲಿ ನೀರು ಬೇಕೆಂದು ದಾಹವಾಗಿದೆ ಎಂದು ಕೇಳಿದನು. ಆದರೇ ಅಲ್ಲಿರುವವರಿಗೆ ತೆಲುಗು ಭಾಷೆ ಬಾರದಿರುವುದರಿಂದ, ಕನ್ನಡ ಭಾಷೆ ತಿಳಿದಿರುವುದರಿಂದ, ದಾಹಗೊಂಡ ಮನುಷ್ಯ ಏನು ಕೇಳುತ್ತಿದ್ದಾನೋ ಅವರಿಗೆ ಏನೂ ಅರ್ಥವಾಗದೆ ಅವರು ನೋಡುತ್ತಾ ನಿಂತುಕೊಂಡಿದ್ದಾರೆ ಹೊರತು ನೀರು ಕೊಡಲಿಲ್ಲ.

ಆಗ ಅವರಿಗೆ ತೆಲುಗು ಭಾಷೆ ತಿಳಿದಿಲ್ಲವೆಂದು ತಿಳಿದ ಆ ದಾಹವಿರುವ ವ್ಯಕ್ತಿ, ತನಗೆ ಇತರ ಭಾಷೆಗಳು ಕೂಡಾ ಸ್ವಲ್ಪ ಬರುವುದರಿಂದ ಹಿಂದಿಯಲ್ಲಿ ಕೇಳಿದನು. ಅವರಿಗೆ ಹಿಂದೀ ಕೂಡಾ ತಿಳಿಯದೆ ಹೋದ್ದರಿಂದ ಅವರು ತಮಗೆ ತಿಳಿದಿಲ್ಲ ಎಂಬಂತೆ ಕೈ ಅಲ್ಲಾಡಿಸಿ ಸುಮ್ಮನಿದ್ದರು. ಅವರಿಗೆ ಹಿಂದೀ ಭಾಷೆ ಕೂಡಾ ತಿಳಿದಿಲ್ಲವೆಂದು ಗ್ರಹಿಸಿದ ಈತ ತಮಿಳು ಭಾಷೆಯಲ್ಲಿ ಕೇಳಿದನು. ಆಗಲೂ ಕೂಡಾ ಅವರು ಭಾಷೆ ನಮಗೆ ತಿಳಿದಿಲ್ಲವೆನ್ನುವ ಅವರ ಭಾವನೆಯನ್ನು ಕೈಯಾಡಿಸಿ ತಿಳಿಸಿದರು. ಈಗ ನಾವು ಗಮನಿಸಿದರೇ ದಾಹಗೊಂಡವನು ಮೂರು ವಿಧಗಳಲ್ಲಿ ಮೂರು ಭಾಷೆಗಳಲ್ಲಿ ತನ್ನ ಭಾವನೆಯನ್ನು ಪ್ರಕಟಿಸಿದಾಗ ಅಲ್ಲಿರುವವರು ತಮಗೆ ಆ ಭಾಷೆ ಬರುವುದಿಲ್ಲವೆಂಬ ಭಾವನೆಯನ್ನು ಕೈ ಅಡ್ಡವಾಗಿ ಅಲ್ಲಾಡಿಸಿ ಅವರ ಭಾವನೆಯನ್ನು ಅವರು ಹೇಳುವುದಾಯಿತು.

ನೀರು ದಾಹವಾದ ಮನುಷ್ಯ ತನ್ನ ಭಾವನೆಯನ್ನು ಮೂರು ವಿಧಗಳ ಭಾಷೆಗಳಲ್ಲಿ ತಿಳಿಸಿದಾಗ ಅವರು ಮಾತ್ರ ತಮಗೆ ತಿಳಿದಿರುವ ಭಾವನೆಯನ್ನು ಕೈ ಅಲುಗಾಡಿಸಿ ತಿಳಿಸಿದರು. ಈತನ ಭಾವನೆಯನ್ನು ಮೂರು ಭಾಷೆಗಳಲ್ಲದೆ ನಾಲ್ಕನೆಯ ಭಾಷೆಯಾದ ಕನ್ನಡದಲ್ಲಿ ಕೇಳಿದನು. ಆಗ ಅವರು ನಗುತ್ತಾ ಕನ್ನಡದಲ್ಲಿಯೇ ಉತ್ತರ ಹೇಳಿ ನೀರು ಕೊಡುವುದು ನಡೆದಿದೆ. ಈ ಬಾರಿ ಎರಡುಕಡೆ ಇಬ್ಬರೂ ಒಂದೇ ಭಾಷೆಯನ್ನು ಮಾತನಾಡುವುದರಿಂದ ಈತನ ಭಾವನೆ ಅವರಿಗೆ ಅರ್ಥವಾಯಿತು. ಅವರ ಭಾವನೆ ಕೂಡಾ ಈತನಿಗೆ ಅರ್ಥವಾಯಿತು.

ಈ ವಿಷಯವು ಹಾಗಿರುವಾಗ ದಾರಿ ಪಕ್ಕದಲ್ಲಿ ಕುಳಿತ ವ್ಯಕ್ತಿಗೆ ದಾರಿಯಲ್ಲಿ ಹೋಗುವ ಇಬ್ಬರು ಅಣ್ಣತಮ್ಮಂದಿರು ಕಾಣಿಸಿದಾಗ ತಮ್ಮನು ನನಗೆ ನೀರು ದಾಹವಾಗಿದೆಯೆಂದು, "ನಿಮ್ಮ ಬಳಿ ನೀರಿದ್ದರೇ ಕೊಡಿ" ಎಂದು ಕೇಳಿದನು. ಆಗ ಆತನು ಆ ಮಾತನ್ನು ಕೇಳಿ "ನನ್ನ ಬಳಿ ನೀರಿವೆ" ಎಂದು ಹೇಳಿ ತಮ್ಮನಿಗೆ ಕೊಡುವುದು ನಡೆದಿದೆ. ಈ ವಿಧವಾಗಿ ಒಂದು ತೆಲುಗು ಭಾಷೆ ಮಾತ್ರ ಬಂದಿರುವುದಕ್ಕೆ ಒಂದು ಮಾತಿನಲ್ಲಿಯೇ ನೀರನ್ನು ಕೇಳಿ ಸಂಪಾದಿಸಿ ಕೊಂಡನು. ನಾಲಕ್ಕು ಭಾಷೆಗಳು ಬಂದ ಅಣ್ಣನಿಗೆ ನೀರು ಸಿಗುವುದಕ್ಕೆ ಐದಾರು ನಿಮಿಷಗಳು ಬೇಕಾಯಿತು. ಇದೆಲ್ಲದಕ್ಕೂ ಕಾರಣ ಒಬ್ಬರಿಂದ ಮತ್ತೊಬ್ಬರಿಗೆ ಭಾವನೆ ಸೇರುವುದರಲ್ಲಿ ಅಣ್ಣನ ಹತ್ತಿರ ತಡವಾಯಿತು. ತಮ್ಮನ ಹತ್ತಿರ ತಡವಾಗಲಿಲ್ಲ. ಭಾವನೆ ಒಬ್ಬರಿಂದ ಮತ್ತೊಬ್ಬರಿಗೆ ಬೇಗನೆ ಸೇರುವುದರಿಂದ ತಮ್ಮನಿಗೆ ಬೇಗನೆ ಕೆಲಸವಾಯಿತು. ಹಾಗೆ ಭಾವನೆ ಒಬ್ಬರಿಂದ ಮತ್ತೊಬ್ಬರಿಗೆ ಸೇರದೆ ತಡವಾಗುವುದರಿಂದ ಅಣ್ಣನ ಕೆಲಸ ತಡವಾಯಿತು. ಭಾವನೆ ಶರೀರದಿಂದ ಹೊರಗೆ ಬರುವ ವಿಧಾನವನ್ನು 'ಭಾಷೆ' ಎನ್ನಬಹುದು.

**1) ಪ್ರಶ್ನೆ :– ಮನುಷ್ಯರಲ್ಲಿ ಭಾಷೆಗಳಿರಬಹುದು. ಅದೇ ಪ್ರಾಣಿಗಳಲ್ಲಾದರೇ ಭಾಷೆಯಿಲ್ಲ ಅಲ್ಲವೇ! ಅವುಗಳ ಪರಿಸ್ಥಿತಿ ಏನು?**

**ಉತ್ತರ :–** ನಿನಗೆ ತಿಳಿದಿರುವ ಭಾಷೆ ಪ್ರಾಣಿಗಳಿಗೆ ತಿಳಿದಿಲ್ಲ. ಅಷ್ಟು ಮಾತ್ರಕ್ಕೆ

ಅವುಗಳಿಗೆ ಭಾಷೆ ಇಲ್ಲವೆಂದು ನೀನು ಹೇಗೆ ಹೇಳಬಲ್ಲೆ? ಇದಕ್ಕು ಮೊದಲು ಹೇಳಿರುವ ಸಂಘಟನೆಯಲ್ಲಿ ಒಬ್ಬ ವ್ಯಕ್ತಿ ಮೂರು ಭಾಷೆಗಳಲ್ಲಿ ಕೇಳಿದರೂ ಅಲ್ಲಿರುವವರಿಗೆ ಅರ್ಥವಾಗಲಿಲ್ಲ. ಅಷ್ಟು ಮಾತ್ರಕ್ಕೆ ಅವರಿಗೆ ಭಾಷೆಯಿಲ್ಲ ಎಂದು ಹೇಳಲಾರೆವು ಅಲ್ಲವೇ! ನಿನಗೆ ಬಂದ ಭಾಷೆ ಅವರಿಗೆ, ಅವರಿಗೆ ಬಂದ ಭಾಷೆ ನಿನಗೆ ತಿಳಿಯದೆ ಹೋಗಿರಬಹುದು. ಅಷ್ಟು ಮಾತ್ರಕ್ಕೆ ಅವರಿಗೆ ಭಾಷೆ ಇಲ್ಲವೆಂದು ಹೇಳುವುದಕ್ಕೆ ಸಾಧ್ಯವಿಲ್ಲ ಅಲ್ಲವೇ! ಹಾಗೆಯೇ ನಿನಗೆ ತಿಳಿದಿರುವ ಭಾಷೆ ಇತರರಿಗಾಗಲೀ, ಇತರ ಪ್ರಾಣಿಗಳಿಗಾಗಲೀ ತಿಳಿಯದಷ್ಟು ಮಾತ್ರಕ್ಕೆ ಅವರಿಗೆ ಭಾಷೆಯೇ ಇಲ್ಲವೆಂದು ಅಂದುಕೊಳ್ಳಬಾರದು. ಇತರರಿಗಾಗಲೀ, ಪ್ರಾಣಿಗಳಿಗಾಗಲೀ ಅವರಿಗೆ ತಿಳಿದಿರುವ ಭಾಷೆ ಪ್ರತ್ಯೇಕವಾಗಿ ಇರಬಹುದು ಅಲ್ಲವೇ! ಇದಕ್ಕು ಮೊದಲು ನೀರಿಗಾಗಿ ಹೋದ ವ್ಯಕ್ತಿ ಅಲ್ಲಿನ ಗುಡಿಸಿಲವಾಸಿಗರನ್ನು ನಾಲಕ್ಕು ಭಾಷೆಗಳಲ್ಲಿ ನೀರು ಕೇಳಿದನು ಆದಕಾರಣ ಅದರಲ್ಲಿ ಒಂದು ಭಾಷೆ ಅವರಿಗೆ ತಿಳಿದಿರುವುದರಿಂದ ಕೊನೆಯಲ್ಲಿ ಕನ್ನಡ ಭಾಷೆಯಿಂದ ಅವರು ಮಾತನಾಡಿದರು. ಒಂದುವೇಳೆ ಅವರಿಗೆ ನಾಲಕ್ಕು ಭಾಷೆಗಳು ಬಾರದೇ ಹೋಗಿದ್ದರೇ, ಭಾರತದೇಶದಲ್ಲಿನ ಭಾಷೆಗಳೆಲ್ಲವನ್ನು ಹೇಳಿದರೂ ಅವು ಅವರಿಗೆ ತಿಳಿಯದೆ ಹೋದರೇ ಅವರಿಗೆ ಭಾಷೆ ಇಲ್ಲವೆಂದು ಹೇಳಬಹುದಾ? ಅವರಿಗೆ ಇತರ ದೇಶ ಭಾಷೆಯಾದ ಚೈನೀ ಭಾಷೆ ಬಂದಿದ್ದರೇ ಆ ಭಾಷೆ ನಿನಗೆ ತಿಳಿದಿಲ್ಲ, ಆದ್ದರಿಂದ ಅದು ನಿನಗೆ ಬರುವುದಿಲ್ಲ ಎಂದು ಸರಿಪಡಿಸಿಕೊಳ್ಳಬಹುದು. ಹಾಗಲ್ಲದೆ ಅವರದ್ದು ಭಾಷೆಯಲ್ಲವೇನೋ, ಅವರಿಗೆ ಭಾಷೆ ಇಲ್ಲವೇನೋ, ಅವರಿಗೆ ಯಾವ ಭಾಷೆ ಬರುವುದಿಲ್ಲವೇನೋ ಎಂದು ಹೇಳಲಾರೆವು ಅಲ್ಲವೇ! ಹಾಗೆಯೇ ಪ್ರಾಣಿಗಳಿಗೆ ಬಂದ ಭಾಷೆ ನಿನಗೆ ತಿಳಿದಿರುವ ಭಾಷೆಗಳಲ್ಲಿ ಇಲ್ಲದೇ ಹೋಗಿರಬಹುದು. ಅವುಗಳ ಭಾಷೆ ನಿನಗೆ ತಿಳಿದಿಲ್ಲವೆಂದು ಹೇಳಬಹುದು ಆದರೇ, ಅವುಗಳಿಗೆ ಭಾಷೆಯೇ ಇಲ್ಲವೆಂದು ಹೇಗೆ ಹೇಳಬಲ್ಲೆವು? ಪ್ರಾಣಿಗಳಿಗೆ, ಪಕ್ಷಿಗಳಿಗೆ, ವೃಕ್ಷಗಳಿಗೆ, ಬಳ್ಳಿಗಳಿಗೆ ಜೀವವಿರುವ ಎಲ್ಲದಕ್ಕೂ ಭಾಷೆ ಇದೆ. ಒಬ್ಬರ ಭಾಷೆ ಮತ್ತೊಬ್ಬರಿಗೆ ತಿಳಿಯದೇ ಹೋಗಿರಬಹುದು ಆದರೇ, ನಮಗೆ ತಿಳಿಯದೆ ಹೋದಷ್ಟು ಮಾತ್ರಕ್ಕೆ ಇತರರಿಗೆ ಭಾಷೆ ಇಲ್ಲ ಎನ್ನುವುದು ತಪ್ಪು.

ಮನುಷ್ಯರಿಗೆ ತಿಳಿದಿರುವ ಭಾಷೆ ಪಕ್ಕದ ರಾಷ್ಟ್ರ ಪ್ರಜೆಗಳಿಗೇ ತಿಳಿದಿಲ್ಲ. ಹಾಗೆ ಭಾಷೆ ತಿಳಿಯದೇ ಹೋಗಬಹುದು ಆದರೇ ಭಾಷೆ ಇಲ್ಲವೆನ್ನುವುದಕ್ಕೆ ಸಾಧ್ಯವಿಲ್ಲ. ಇದನ್ನನುಸರಿಸಿ ಪ್ರಾಣಿಗಳಿಗೆ, ವೃಕ್ಷಗಳಿಗೆ ಕೂಡಾ ಭಾಷೆಯಿದೆಯೆಂದು ಹೇಳಬಹುದು.

**2) ಪ್ರಶ್ನೆ :– ಮನುಷ್ಯರಲ್ಲಿ ಒಂದು ಭಾಷೆ ತಿಳಿದವರು ಇದ್ದಾರೆ. ಹಾಗೆಯೇ ಹೆಚ್ಚಿನ ಭಾಷೆಗಳು ತಿಳಿದಿರುವವರು ಇದ್ದಾರೆ. ಪ್ರಾಣಿಗಳಲ್ಲಿ ಅವುಗಳಿಗೆ ತಿಳಿದಿರುವ ಭಾಷೆ ಒಂದೇ ಇರುತ್ತದಾ? ಇಲ್ಲವೇ ಹೆಚ್ಚು ಭಾಷೆಗಳು ಕೂಡಾ ಇವೆಯಾ?**

**ಉತ್ತರ :–** ಪ್ರಾಣಿಗಳಲ್ಲಿ ಅನೇಕ ಜಾತಿಗಳಿವೆ. ಒಂದೊಂದು ಜಾತಿಗೆ ಒಂದೊಂದು ಭಾಷೆ ಇದೆ. ಒಂದು ಜಾತಿಯಲ್ಲಿಯೇ ಅನೇಕ ಭಾಷೆಗಳಿಲ್ಲ. ಪ್ರಾಣಿಗಳಲ್ಲಿ ಬೆಕ್ಕಿನ ಜಾತಿ ಬೇರೆ, ಕೋತಿ ಜಾತಿ ಬೇರೆಯಾಗಿ ಇರುವುದರಿಂದ ಬೆಕ್ಕಿನ ಜಾತಿಗೆ ಒಂದು ವಿಧವಾದ ಭಾಷೆ, ಕೋತಿ ಜಾತಿಗೆ ಒಂದು ವಿಧವಾದ ಭಾಷೆ ಬೇರೆಬೇರೆಯಾಗಿವೆ. ಅದೇ ವಿಧವಾಗಿ ಪ್ರತಿ ಜಾತಿಗೆ ಅವುಗಳಿಗೆ ಜನ್ಮದಿಂದಲೇ ಬಂದಿರುವ ಭಾಷೆ ಒಂದಿದೆ. ಆದ್ದರಿಂದ ಎಲ್ಲ ವಿಧಗಳ ಜಾತಿಗಳಿಗೆ ಎಲ್ಲ ಪ್ರತ್ಯೇಕ ಭಾಷೆಗಳು ಇವೆಯೆಂದು ಹೇಳಬಹುದು.

**3) ಪ್ರಶ್ನೆ :– ಮನುಷ್ಯ ಶಿಶು ದಶೆಯಿಂದ ತಾಯಿತಂದೆಯರನ್ನು ಗಮನಿಸುತ್ತಿರುವುದರಿಂದ ಮೂರರಿಂದ ಐದು ವರ್ಷಗಳ ಒಳಗಿನ ಮಕ್ಕಳಿಗೆ ಹಿರಿಯರು ಮಾತನಾಡುವ ಭಾಷೆ ಬರುತ್ತಿದೆ. ಮೂರರಿಂದ ಐದು ವರ್ಷಗಳ ಮಕ್ಕಳಿಗೆ ಹಿರಿಯರು ಹೇಳಿರುವುದು ಅರ್ಥವಾಗಬಲ್ಲದು. ಅದಕ್ಕಿಂತಲೂ ಚಿಕ್ಕ ಮಕ್ಕಳಿಗೆ ಅಂದರೇ ಹಿರಿಯರ ಭಾಷೆ ಪೂರ್ತಿಯಾಗಿ ತಿಳಿಯದ ಮಕ್ಕಳಿಗೆ ಹಿರಿಯರು ಹೇಳಿರುವ ಮಾತುಗಳು ಅರ್ಥವಾಗುವುದಿಲ್ಲ. ಆಗ ಅವರಿಗೆ ಭಾಷೆ ಪೂರ್ತಿ ತಿಳಿಯದೆಂದು ನಮಗೆ ಕೂಡಾ ತಿಳಿದುಹೋಗುತ್ತಿದೆ. ಅದೇ ಪ್ರಾಣಿಗಳಲ್ಲಾದರೇ ಹುಟ್ಟಿದ ಗಂಟೆಯಿಂದ ತಾಯಿ ಪ್ರಾಣಿ ಭಾಷೆಯನ್ನು (ಸೂಚನೆಗಳನ್ನು) ಮರಿಪ್ರಾಣಿ ಗ್ರಹಿಸುತ್ತಿದೆ. ಅಷ್ಟು ಚಿಕ್ಕ ವಯಸ್ಸಿನಲ್ಲಿ ಯಾವ ಅನುಭವವಿಲ್ಲದೇ ಆ ಮರಿಪ್ರಾಣಿ ತಾಯಿಯ ಭಾವನೆಯನ್ನು ಹೇಗೆ ತಿಳಿದುಕೊಂಡಿದೆ?**

**ಉತ್ತರ:–** ಮನುಷ್ಯರು ನೀರಿನಲ್ಲಿ ಈಜುವುದಕ್ಕೆ ಕೆಲವು ದಿನಗಳು ತರಬೇತಿ ಪಡೆದರು ಈಜುವುದನ್ನು ಕಲಿಯುವುದಿಲ್ಲ. ನೀರಿನಲ್ಲಿ ಈಜುವುದಕ್ಕೆ ಸ್ವಲ್ಪ ತರಬೇತಿ ಇಲ್ಲದೇ ಈಜುವುದು ಸಾಧ್ಯವಿಲ್ಲ. ಅಂತಹ ಚಿಕ್ಕ ನಾಯಿಮರಿಯನ್ನು ನೀರಿನಲ್ಲಿ ಹಾಕಿದರೇ ಎಂತಹ ತರಬೇತಿ ಇಲ್ಲದೇ ಈಜುತ್ತದೆ. ಮನುಷ್ಯರು ಶಿಶುವಾಗಿ ತಾಯಿ ಮಡಿಲಲ್ಲಿ ಇರುವಾಗ ಮೂರು ತಿಂಗಳವರೆಗು ತಾಯಿಯ ಹಾಲು ಎಲ್ಲಿರುವುದು ಶಿಶುವಿಗೆ ತಿಳಿಯುವುದಿಲ್ಲ. ತಾಯಿ ಬಾಯಿಯಲ್ಲಿಟ್ಟು ಕುಡಿಸಿದರೇ ಹೊರತು ಅವನು ಕುಡಿಯಲಾರನು. ಅದೇ ಪ್ರಾಣಿಯ ಮರಿಯಾದರೇ ಹುಟ್ಟಿದ ನಂತರ ನಿಮಿಷಕ್ಕೇ ತಾಯಿಯ ಕೆಚ್ಚಲನ್ನು ಗುರುತಿಸಿ ಹಾಲನ್ನು ಕುಡಿಯುತ್ತದೆ. ಮನುಷ್ಯ ಚಿಕ್ಕವನಿರುವಾಗ ನಡೆಯುವುದು ಕಲಿಯುವುದಕ್ಕೆ ಏಳು ತಿಂಗಳಿನಿಂದ ಎರಡು ವರ್ಷಗಳ ಕಾಲ ಬೇಕಾಗಬಹುದು. ಅದೇ ಜಿಂಕೆ ಮರಿಗೆ ಎದ್ದು ನಡೆಯುವುದಕ್ಕೆ ಒಂದು ನಿಮಿಷ, ಓಡುವುದಕ್ಕೆ ಎರಡು ನಿಮಿಷಗಳ ಕಾಲ ಸರಿಹೋಗುತ್ತಿದೆ. ಮನುಷ್ಯರಿಗೆ, ಪ್ರಾಣಿಗಳಿಗೆ ಹೋಲಿಸಿಕೊಂಡು ನೋಡಿದರೇ ಇದೆಲ್ಲಾ ಹೇಗೆ ನಡೆಯುತ್ತಿದೆ ಎಂಬ ಪ್ರಶ್ನೆ ಬರಬಹುದು. ಅದಕ್ಕೆ ಒಂದೇ ಉತ್ತರ ಹೇಳಬೇಕೆಂದರೇ ಹೀಗಿದೆ. ಪ್ರಾಣಿಗಳು ಕೆಲವು ವಿಷಯಗಳನ್ನು ಕಲಿಯಬೇಕಾದ ಕೆಲಸವಿಲ್ಲ. ಕಲಿಯದೇನೆ ಅವುಗಳಿಗೆ ತಿಳಿದು ಹೋಗುವಂತೆ ಅವುಗಳ ಶರೀರದಲ್ಲಿಯೇ ಅಂತಹ ನಿರ್ಮಾಣವನ್ನು ದೇವರು ಏರ್ಪಡಿಸಿದ್ದಾನೆ. ಇಲ್ಲಿ ದೇವರು ಏರ್ಪಡಿಸಿದ್ದಾನೆಂದು ದೇವರ ಗೌರವಾರ್ಥವಾಗಿ ಹೇಳುತ್ತಿದ್ದೇವೆ. ವಾಸ್ತವವನ್ನು ಹೇಳಿದರೇ ದೇವರು ಏನೂ ಮಾಡಲಿಲ್ಲ ಆದರೇ, ದೇವರ ನಂತರ ಇರುವವನು, ಶರೀರಕ್ಕೆ ಅಧಿಪತಿಯಾಗಿರುವವನು, ಜೀವಿಗಳೆಲ್ಲವನ್ನು ಭರಿಸುವವನು ಯಾರಾದರೆ ಇದ್ದಾನೋ ಅವನೇ ಪ್ರಾಣಿಗಳಿಗೆ ಚಿಕ್ಕಂದಿನಲ್ಲೇ ಎಲ್ಲಾ ಕಲಿಸಿ, ಎಲ್ಲವನ್ನು ಮಾಡಿಸುತ್ತಿದ್ದಾನೆ.

**4) ಪ್ರಶ್ನೆ :– ಒಂದು ಭಾಷೆಯಿಂದ ಮಾತನಾಡಿದರೇ ಭಾಷೆಯನ್ನು ಆಲಿಸಿದ ನಂತರ ಆಲಿಸಿದವರಿಗೆ ಭಾಷೆಯಲ್ಲಿನ ಭಾವನೆ ತಿಳಿಯುತ್ತಿದೆ. ಇದನ್ನನುಸರಿಸಿ ಭಾಷೆ ಮೊದಲು, ನಂತರ ಭಾವನೆ ಎಂದು ತಿಳಿಯುತ್ತಿದೆ. ಹಾಗಿರುವಾಗ ಮೊದಲು**

**ಭಾಷೆ, ನಂತರ ಭಾವನೆ ಎಂದು ಬರೆಯದೆ, ನೀವು ಗ್ರಂಥದ ಮೇಲಿನ ಭಾಗದಲ್ಲಿ ಗ್ರಂಥದ ಹೆಸರಿನಲ್ಲಿ ಮೊದಲು ಭಾವನೆಯನ್ನು ನಂತರ ಭಾಷೆಯನ್ನು ಬರೆಯುತ್ತಾ "ಭಾವನೆ-ಭಾಷೆ" ಎಂದು ಬರೆದಿದ್ದೀರ. ಹಾಗೆ ಬರೆಯಬಾರದಲ್ಲವೇ! ಮೊದಲು ಭಾಷೆ ಎಂದು ಬರೆದು ನಂತರ ಭಾವನೆ ಎಂದು ಬರೆಯಬೇಕಲ್ಲವೇ! ವಾಸ್ತವವಾಗಿ ಬರೆಯಬೇಕಾಗಿರುವುದು "ಭಾಷೆ– ಭಾವನೆ" ಎಂದು ಬರೆಯಬೇಕಾಗಿತ್ತು.**

**ಉತ್ತರ :–** ನಾವು ಬರೆದಿರುವ "ಭಾವನೆ–ಭಾಷೆ" ಪದವು ತಪ್ಪಲ್ಲ. ಏನಾದರೂ ಗ್ರಹಿಸುವುದಕ್ಕಾಗಲೀ, ಬೋಧಿಸುವುದಕ್ಕಾಗಲೀ ಮೊದಲು ಪೂರ್ತಿ ವಿಚಕ್ಷಣೆ ಜ್ಞಾನವಿದ್ದು ಎಲ್ಲ ವಿಧಗಳಲ್ಲಿ ಅರ್ಥ ಮಾಡಿಕೊಂಡು, ಸತ್ಯಾಸತ್ಯಗಳನ್ನು ನಿರ್ಣಯಿಸಿಕೊಂಡು ಮೊದಲು ಭಾವನೆ ನಂತರ ಭಾಷೆ ಇರುವಂತೆ **"ಭಾವನೆ–ಭಾಷೆ"** ಎಂದು ಬರೆದಿದ್ದೇವೆ. ಇದನ್ನು ತಪ್ಪು ಎನ್ನುವುದಕ್ಕೆ ಮೊದಲು ನೀವು ಇದರಲ್ಲಿರುವ ಸತ್ಯಾಸತ್ಯಗಳನ್ನು ಕುರಿತು ಆಲೋಚಿಸಿದ್ದೀರಾ? ಎಂದು ಪ್ರಶ್ನಿಸುತ್ತಿದ್ದೇನೆ. ನಮಗೆ ನಲವತ್ತು ವರ್ಷಗಳ ಆಧ್ಯಾತ್ಮಿಕ ಜ್ಞಾನ ಅನುಭವ ಇರುವುದರಿಂದ ಅನೇಕ ಕೋನಗಳಿಂದ ಆಲೋಚಿಸಿ ಮೊದಲು ಭಾವನೆ ಹಿಂದೆ ಭಾಷೆ ಎಂದು ಬರೆದಿದ್ದೇನೆ. ನಾನು ಬರೆದಿರುವುದಕ್ಕೆ ಆಧಾರಗಳಿವೆ. ನೀವು ಅಂದುಕೊಂಡ ವಿಧವಾಗಿ ಬಹಳಜನ ಅಂದುಕೊಳ್ಳಬಹುದು. ಅವರೆಲ್ಲರಿಗೂ ಒಂದೇ ಉತ್ತರ ಹೇಳುತ್ತಿದ್ದೇನೆ. ನಾನು ಬರೆದಿರುವುದು ಸತ್ಯವೇ, ನೀವು ಬರೆಯುವುದು ಸತ್ಯವಾ? ನೀವು ಬರೆಯುವುದು ತಪ್ಪೋ ಒಪ್ಪೋ ಒಂದನ್ನು ನೋಡಿ. ತಂದೆ ಮೊದಲನೆಯವನಾದರೂ ತಾಯಿ ಎರಡನೆ ಯವಳಾದರೂ ಬರೆಯುವುದರಲ್ಲಿ ಮೊದಲು ತಂದೆಯನ್ನು ಬರೆಯದೆ ಮೊದಲು ತಾಯಿಯನ್ನು ಬರೆದು ನಂತರ ತಂದೆಯನ್ನು ಬರೆಯುತ್ತಿದ್ದಾರೆ. ತಾಯಿ ತಂದೆಯೆಂದು ಇರುವುದು ಸರಿಯಲ್ಲವೆಂದು ನಾವು ಕೂಡಾ ಹೇಳಬಲ್ಲೆವು. ಕೈಲಾಸದಲ್ಲಿ ಈಶ್ವರನು ಮುಖ್ಯವಾದವನು. ಆತನ ನಂತರ ಆತನ ಹೆಂಡತಿಯನ್ನು ಕುರಿತು ಹೇಳಬಹುದು. ಆದರೇ ಮೊದಲ ಭಾಗದಲ್ಲಿ ಈಶ್ವರನನ್ನು ಬರೆಯದೆ ಪಾರ್ವತಿ ಪರಮೇಶ್ವರರೆಂದು ಈಶ್ವರನನ್ನು ಹಿಂದೆ ಬರೆಯುವುದು

ಚೆನ್ನಾಗಿಲ್ಲವೆಂದು ನೀವು ಯಾಕೆ ಹೇಳಬಾರದು? ಹಾಗೆ ಬರೆಯುವುದರಲ್ಲಿ ತಪ್ಪು ಹಿಡಿಯಬಹುದು ಆದರೇ, ನಾವು ಬರೆದಿರುವ "ಭಾವನೆ–ಭಾಷೆ" ತಪ್ಪು ಹಿಡಿಯುವುದರಲ್ಲಿ ಅರ್ಥವಿಲ್ಲ. ಚೆನ್ನಾಗಿ ಆಲೋಚಿಸಿ ನೋಡಿದರೇ ನಾನು ಹೇಳಿರುವುದು ಸತ್ಯವೆಂದು ತಿಳಿಯುವುದು.

ಮೊದಲು ಮನುಷ್ಯನ ಶರೀರದಲ್ಲಿ ಗುಣಗಳ ಪ್ರೇರಣೆ ನಡೆಯುತ್ತಿರುತ್ತದೆ. ಗುಣಗಳ ಪ್ರೇರಣೆಯಲ್ಲಿ ಗುಣ ವಿಷಯಗಳನ್ನು ಬುದ್ಧಿ ಪರಿಶೀಲಿಸುತ್ತಿರುತ್ತದೆ. ಆಗ ಕರ್ಮ ನಿರ್ಣಯದ ಪ್ರಕಾರವಿರುವ ವಿಷಯವನ್ನು ಚಿತ್ತವು ಸೂಚಿಸಿದರೇ ಬುದ್ಧಿ ಅದನ್ನೇ ತೆಗೆದುಕೊಂಡು ಮನಸ್ಸಿಗೆ ಆ ವಿಷಯವನ್ನು ತಿಳಿಸುವುದು. ಇದು ಇಂತಹ ವಿಷಯವೆಂದು ಅದನ್ನು ಪೂರ್ತಿಯಾಗಿ ತಿಳಿಸಿ, ಅದನ್ನೆಲ್ಲವನ್ನು ಒಂದು ಭಾವನೆಯಾಗಿ ಮಾಡಿ ಮನಸ್ಸಿಗೆ ಕೊಟ್ಟಾಗ, ಮನಸ್ಸು ಆ ವಿಷಯ ಭಾವನೆಯನ್ನು ಇತರರಿಗೆ ತಿಳಿಸುವುದಕ್ಕೆ ನಾಲಿಗೆಗೆ ಒದಗಿಸುತ್ತದೆ. ಆಗ ನಾಲಿಗೆ ಬುದ್ಧಿ ಒಳಗಿನಿಂದ ತಿಳಿಸಿರುವ ಭಾವನೆಯನ್ನು ಮನಸ್ಸಿನ ಮೂಲಕ ಪಡೆದಿರುವುದಾಗಿ ತನಗೆ ತಿಳಿದಿರುವ ಭಾಷೆಯನ್ನು ಉಪಯೋಗಿಸಿ ಹೊರಗೆ ಮಾತುಗಳ ರೂಪದಲ್ಲಿ ಹೇಳುವುದು. ಆಗ ಒಳಗಿನಿಂದ ಬಂದ ಭಾವನೆಯೆಲ್ಲವೂ ಮಾತುಗಳ ಭಾಷೆಯ ಮೂಲಕ ಕೇಳಿಸಿಕೊಂಡವರು ಗ್ರಹಿಸುತ್ತಾರೆ. ಈ ಕಾರ್ಯದಲ್ಲಿ ಮೊದಲು ಗುಣಭಾವನೆಯು ಬುದ್ಧಿಗೆ ಬಂದಾಗ, ನಂತರ ಕರ್ಮ ಪ್ರಕಾರ ಚಿತ್ತ ನಿರ್ಣಯಿಸಿದಾಗ, ಚಿತ್ತವು ಒಪ್ಪಿಕೊಂಡಿರುವುದನ್ನು ಬುದ್ಧಿ ಭಾವನೆಯ ರೂಪದಲ್ಲಿ ಮನಸ್ಸಿಗೆ ತಿಳಿಸಿದಾಗ, ಮನಸ್ಸು ನಾಲಿಗೆಗೆ ತಿಳಿಸಿದಾಗ, ಆಗ ನಾಲಿಗೆ ಭಾಷೆಯನ್ನು ಉಪಯೋಗಿಸಿ ಮಾತುಗಳ ರೂಪದಲ್ಲಿ ಹೇಳುತ್ತಿದೆ. ಈ ವಿಧಾನವೆಲ್ಲ ನೋಡಿದ ನಂತರ ಮನುಷ್ಯನಲ್ಲಿ ಭಾವನೆ ಮೊದಲು ಹುಟ್ಟಿದೆಯಾ, ಭಾಷೆ ಮೊದಲು ಹುಟ್ಟಿದೆಯಾ? ಎಂದು ಪ್ರಶ್ನಿಸಿದರೇ, ಮನುಷ್ಯನ ಶರೀರದಲ್ಲಿ ತಲೆಯಲ್ಲಿರುವ ಗುಣಗಳಲ್ಲಿ ಹುಟ್ಟಿರುವುದು ಭಾವನೆ, ನಂತರ ಚಿತ್ತ, ಬುದ್ಧಿ, ಮನಸ್ಸು, ನಾಲಿಗೆಯವರೆಗು ಭಾವನೆ ಸೇರಿದ ನಂತರ ಭಾಷೆ ಹುಟ್ಟಿದೆ. ಇದನ್ನನುಸರಿಸಿ ಕೊನೆಯಲ್ಲಿ ಹುಟ್ಟಿರುವ ಭಾಷೆಗಿಂತಲೂ ಮೊದಲು

ಹುಟ್ಟಿರುವುದು ಭಾವನೆಯೇ ಎಂದು ಹೇಳಬಹುದು. ಗುಣಗಳಲ್ಲಿ ಹುಟ್ಟಿರುವ ಭಾವನೆ ಐದು ಜಾಗಗಳು ಬದಲಾಗಿ ಬಂದು ಕೊನೆಗೆ ಭಾಷೆಯಾಗಿದೆ.

ನಾಲಿಗೆಯವರೆಗು ಬಂದ ಭಾವನೆ ಮನುಷ್ಯನಿಗೆ ತಿಳಿದ ಭಾಷೆಯಲ್ಲಿ ಹೊರಗೆ ಬಂದರೇ, ಅದನ್ನು ಆಲಿಸುವವನಿಗೆ ಆ ಭಾಷೆ ಬಂದಿದ್ದರೇ ಅವನಿಗೆ ಮತ್ತೊಬ್ಬನಿಂದ ಬಂದ ಭಾವನೆ ತಿಳಿಯುವುದು. ಹೊರಗೆ ಭಾಷೆಯನ್ನು ಆಲಿಸುವವನಿಗೆ ಕಿವಿಗಳಲ್ಲಿ ಆಲಿಸುವ ಲೋಪವಿದ್ದರೂ, ಹೇಳಿರುವ ಭಾಷೆ ತಿಳಿಯದಿದ್ದರೂ, ಬುದ್ಧಿಗೆ ಗ್ರಾಹಿತ ಶಕ್ತಿ ಸರಿಯಾಗಿ ಇಲ್ಲದಿದ್ದರೂ, ಬಂದ ಭಾವನೆ ಎರಡನೆಯ ಮನುಷ್ಯನಿಗೆ ಅಂದರೇ ಆಲಿಸುವ ಮನುಷ್ಯನಿಗೆ ಸರಿಯಾಗಿ ತಿಳಿಯದೇ ಹೋಗುತ್ತದೆ. ಆದ್ದರಿಂದ ಎದುರಿನ ಮನುಷ್ಯನಿಗೆ ಆಲಿಸುವ ಕಿವಿಗಳು, ಗ್ರಹಿಸುವ ಬುದ್ಧಿ ಚೆನ್ನಾಗಿದ್ದರೂ, ಅವನಿಗೆ ಗೊತ್ತಿರುವ ಭಾಷೆ ಇದ್ದರೇನೇ ಸಮಾಚಾರ ಆತನಿಗೆ ಸೇರುತ್ತದೆ. ಒಂದು ಭಾಷೆ ತಿಳಿಯದೆ ಹೋದರೇ ಭಾವನೆ ಸ್ವಲ್ಪವಾದರೂ ತಿಳಿಯುವುದಕ್ಕೆ ಅವಕಾಶವೇ ಇಲ್ಲ. ಆದ್ದರಿಂದ ಎದುರಿಗಿರುವವನಿಗೆ ತಿಳಿದಿರುವ ಭಾಷೆಯಲ್ಲಿಯೇ ಹೇಳುವುದು ಮುಖ್ಯ. ಆಲಿಸುವುದು ಸರಿಯಾಗಿಲ್ಲದಿದ್ದರೂ, ಬುದ್ಧಿ ಗ್ರಾಹಿತ ಸರಿಯಾಗಿಲ್ಲದಿದ್ದರೂ, ಸಮಾಚಾರ ಸ್ವಲ್ಪ ಸೇರದೇ ಹೋದರೂ ಉಳಿದ ಸಮಾಚಾರವೆಲ್ಲಾ ತಿಳಿದು ಹೋಗುವುದು. ಭಾಷೆ ತಿಳಿಯದೆ ಹೋದರೇ ಸಮಾಚಾರ ಸ್ವಲ್ಪವಾದರೂ ತಿಳಿಯುವುದಿಲ್ಲ.

**5) ಪ್ರಶ್ನೆ :– ಭಾಷೆಯನ್ನು ಕೆಲವರು 'ಮಾತೃಭಾಷೆ" ಎಂದು ಹೇಳುತ್ತಿರುತ್ತಾರೆ. ಮಾತೃ ಭಾಷೆ ಎಂದರೇ ಅರ್ಥವೇನು?**

**ಉತ್ತರ:–** ಭಾಷೆಯೊಂದರ ಜನ್ಮ ಸ್ಥಾನವನ್ನು ಮಾತೃ ಎಂದು ಹೇಳಬಹುದು. ಮಾತೃ ಭಾಷೆಯೆಂದಾಗ ಒಂದು ಭಾಷೆಗೆ ತಾಯಿಯಂಥ ಭಾಷೆಯನ್ನು ಮಾತೃ ಭಾಷೆಯೆನ್ನುವುದು ನಡೆಯುತ್ತಿರುತ್ತದೆ. ಆದರೂ ಈದಿನ ಮಾತನಾಡಿದಷ್ಟು ಅರ್ಥವನ್ನು ತಿಳಿದು ಮಾತನಾಡುತ್ತಿಲ್ಲ. ಒಬ್ಬರು ಅಂದಮಾತನ್ನು ಕೇಳಿ ಇನ್ನೊಬ್ಬರು ಮಾತನಾಡುವುದು ನಡೆಯುತ್ತಿದೆ ಆದರೇ, ಪೂರ್ತಿ ಅರ್ಥ ತಿಳಿದು ಮಾತನಾಡುತ್ತಿಲ್ಲವೆಂದು ತಿಳಿಯುತ್ತಿದೆ.

**6) ಪ್ರಶ್ನೆ :– ಭಾಷೆಗೆ ಮಾತೃಸ್ಥಾನ ಮನುಷ್ಯನಾ ಅಥವಾ ಬೇರೆ ಭಾಷೆನಾ? ಒಂದು ಭಾಷೆ ಹುಟ್ಟುತ್ತಿದೆ ಎಂದರೇ ಅದು ಮನುಷ್ಯನ ಮೂಲಕ ಹುಟ್ಟುತ್ತಿದೆಯಾ? ಅಥವಾ ಭಾಷೆ ಮೂಲಕ ಹುಟ್ಟುತ್ತಿದೆಯಾ? ಇನ್ನೊಂದು ವಿಧವಾಗಿ ಕೇಳಿದರೇ ಭಾಷೆಗೆ ಜನ್ಮ ಸ್ಥಾನ ಮತ್ತೊಂದು ಭಾಷೆಯಲ್ಲಿರುತ್ತದಾ? ಅಥವಾ ಮನುಷ್ಯನಲ್ಲಿಯೇ ಭಾಷೆ ಹುಟ್ಟಿದೆಯಾ? ವಿವರವಾಗಿ ಹೇಳಿರಿ.**

**ಉತ್ತರ :–** ಮಾತೃಭಾಷೆ ಎಂದರೇ ತಾಯಿ ಭಾಷೆ ಎಂದು ಅರ್ಥ. ಯಾವ ಭಾಷೆಯಾದರೂ ಮತ್ತೊಂದು ಭಾಷೆಯಿಂದ ಹುಟ್ಟಿದೆ ಎಂದೇ ಅರ್ಥ. ಒಂದು ಭಾಷೆಯಿಂದ ಮತ್ತೊಂದು ಭಾಷೆ ಸ್ವಲ್ಪ ಬದಲಾವಣೆ ಹೊಂದುತ್ತಾ ಇತರ ಭಾಷೆಯಾಗಿ ಬದಲಾಗಿಹೋಗುತ್ತಿದೆ. ಆ ವಿಧವಾಗಿ ಬದಲಾದ ಭಾಷೆಗಳು ಅಂದರೇ ತಯಾರಾದ ಭಾಷೆಗಳು ಪ್ರಪಂಚವೆಲ್ಲಾ ನೋಡಿದರೇ 7105 ಭಾಷೆ ಗಳಿದ್ದಂತೆ ವದಂತಿ. ಅದರಲ್ಲಿ 3570 ಭಾಷೆಗಳು ಲಿಪಿ ಇರುವವೆಂದು ತಿಳಿಯುತ್ತಿದೆ. ವಿಶ್ವದಲ್ಲಿ ಎಷ್ಟು ಭಾಷೆಗಳಿದ್ದರೂ ಒಂದಕ್ಕೊಂದು ಹುಟ್ಟಿರುವವೆಂದು ಹೇಳಬಹುದು. ಈ ವಿಧವಾಗಿ ಹೇಳಿದರೇ ಒಂದು ಭಾಷೆ ಮತ್ತೊಂದು ಭಾಷೆಗೆ ತಾಯಿಯಾಗಿದೆ. ತಾಯಿ ಭಾಷೆಯಿಂದ ಬದಲಾವಣೆ ಹೊಂದಿ ಹೊಸದಾಗಿ ತಯಾರಾದುದನ್ನು ಮರಿ ಭಾಷೆ ಎಂದು ಹೇಳಬಹುದು. ಮರಿ ಭಾಷೆಗೆ ಮಾತೃ ಭಾಷೆ ತಪ್ಪದೇ ಇದ್ದಾಗ, ಮಾತೃ ಭಾಷೆಗೆ ಒಂದಾಗಲೀ ಹೆಚ್ಚಾಗಲೀ ಮರಿ ಭಾಷೆಗಳಿರಬಹುದು. ಒಬ್ಬ ತಾಯಿಗೆ ಒಂದು ಮಗು ಇರಬಹುದು ಅಥವಾ ಇಬ್ಬರು, ಮೂವರು ಮಕ್ಕಳಿರಬಹುದು. ಹಾಗೆಯೇ ಒಂದು ಭಾಷೆಗೆ ಕೂಡಾ ಒಂದಾಗಲೀ, ಅಥವಾ ಎರಡು ಮೂರಾಗಲೀ ಭಾಷೆಗಳು ತಯಾರಾಗಿರಬಹುದು. ಇಲ್ಲದೇ ಹೋದರೇ ಒಂದುಭಾಷೆಯೇ ತಯಾರಾಗಿರ ಬಹುದು. ಅಷ್ಟಕ್ಕು ಒಂದು ಭಾಷೆ ಇಲ್ಲದೇ ಮತ್ತೊಂದು ಭಾಷೆ ಹುಟ್ಟುವುದಿಲ್ಲವೆಂದು ಹೇಳಬಹುದು.

**7) ಪ್ರಶ್ನೆ :– ಒಬ್ಬ ತಾಯಿಗೆ ಒಂದು ಮಗು ಹುಟ್ಟಬಹುದು ಇಲ್ಲವೇ ಇಬ್ಬರು, ಮೂವರು ಹುಟ್ಟಬಹುದು. ಹಿಂದಿನ ಕಾಲಕ್ಕೆ ಹೋದರೇ ಹಾಗೆಯೇ**

**ನಡೆದಿರಬಹುದು. ಇನ್ನೂ ಹಿಂದಕ್ಕೆ ಹೋದರೆ ಸೃಷ್ಠಿ ಆದಿಯಲ್ಲಿ ಮನುಷ್ಯರೇ ಇಲ್ಲದಿರುವಾಗ ತಾಯಿಯೇ ಇಲ್ಲವಲ್ಲ! ಆಗ ಮೊದಲು ಸ್ತ್ರೀ ಹೇಗೆ ಹುಟ್ಟಿದ್ದಾಳೆ? ಮೊದಲು ಸ್ತ್ರೀ ತಯಾರಾದ ನಂತರ ಆಕೆಗೆ ಮಕ್ಕಳು ಹುಟ್ಟಿರುತ್ತಾರೆ. ಆ ಮಕ್ಕಳು ತಾಯಂದಿರಾದರೇ ಅವರಿಗೆ ಮಕ್ಕಳು ಹುಟ್ಟಿರುತ್ತಾರೆ. ಆ ವಿಧವಾಗಿ ಈದಿನ ಜನಸಂಖ್ಯೆ ಬೆಳೆದುಹೋಗಿದೆ. ಹಾಗೆಯೇ ಮೊದಲು ಸೃಷ್ಠಿ ಆದಿಯಲ್ಲಿ ಒಂದು ಭಾಷೆ ಕೂಡಾ ಇಲ್ಲದಿರುವಾಗ ಮೊದಲ ಭಾಷೆ ಹೇಗೆ ಹುಟ್ಟಿದೆ? ಅದರ ನಂತರ ಮೊದಲ ಭಾಷೆಗೆ ನಂತರದ ಭಾಷೆಗಳು ಹುಟ್ಟಿರಬಹುದು. ಸ್ತ್ರೀಗೆ ಸಂತಾನ ಹೇಗೆ ತಯಾರಾಗುತ್ತಾ ಬಂದಿದೆಯೋ ಹಾಗೆಯೇ ಒಂದು ಭಾಷೆಗೆ ಉಳಿದ ಭಾಷೆಗಳು ತಯಾರಾಗುತ್ತಾ ಬಂದಿರುತ್ತವೆ. ಆದರೇ ಮೊದಲು ಭಾಷೆ ಹೇಗೆ ತಯಾರಾಗಿದೆಯೋ ಅದಕ್ಕೆ ಕಾರಣ ಯಾರೋ ತಿಳಿಸಬೇಕು?**

**ಉತ್ತರ :–** ಸೃಷ್ಠಿ ಆದಿಯಲ್ಲಿ ತಾಯಿ ಇಲ್ಲ. ತಾಯಿ ಇಲ್ಲದೇ ಮಗು ಹುಟ್ಟುವುದು ನಡೆದಿದೆ. ಮೊಟ್ಟಮೊದಲು ಯಾರಿಗೂ ತಾಯಿತಂದೆಯರಿಲ್ಲ. ಆ ಸ್ಥಿತಿಯಲ್ಲಿ ದೇವರು ಸ್ವತಃವಾಗಿ ತಾಯಿತಂದೆಯರಿಲ್ಲದೇ ಮನುಷ್ಯರನ್ನು, ಹೆಣ್ಣು ಗಂಡು ಪ್ರಾಣಿಗಳಿಲ್ಲದೇ ಪ್ರಾಣಿಗಳನ್ನು, ಬೀಜವಿಲ್ಲದೆ ವೃಕ್ಷಗಳನ್ನು, ಅಂಡವಿಲ್ಲದೆ ಪಕ್ಷಿಗಳನ್ನು ದೇವರು ಸೃಷ್ಠಿಸುವುದು ನಡೆದಿದೆ.

ಭೂಮಿಮೇಲೆ ಜೀವರಾಶಿಗಳೆಲ್ಲ ಮೂರು ವಿಧಗಳ ಹುಟ್ಟುವಿಕೆಗಳಿಂದ ಇವೆ. ಅಂಡಜಗಳು ಕೆಲವು, ಪಿಂಡಜಗಳು ಕೆಲವು, ಉದ್ಭಿಜಗಳು ಕೆಲವು ಇವೆ. ಅಂಡಜಗಳೆಂದರೇ ಮೊಟ್ಟೆಯಿಂದ ಹುಟ್ಟಿರುವವು. ಪಿಂಡಜಗಳೆಂದರೇ ಪ್ರಾಣಿಗಳಿಂದ ಹುಟ್ಟಿರುವವು. ಉದ್ಭಿಜಗಳೆಂದರೇ ಬೀಜದಿಂದ ಹುಟ್ಟಿರುವವು ಎಂದು ಹೇಳಬಹುದು. ಇವೆಲ್ಲವೂ ಸೃಷ್ಟಿ ನಂತರ ಉಂಟಾಗುತ್ತಿರುವ ಜನ್ಮಗಳು. ಸೃಷ್ಠಿ ಆದಿಯಲ್ಲಿ ಅಂಡವಿಲ್ಲ, ಪಿಂಡವಿಲ್ಲ, ಬೀಜವಿಲ್ಲ. ಸೃಷ್ಟಿ ಆದಿಯಲ್ಲಿ ಉತ್ಪತ್ತಿ ಬೀಜಗಳಾದ ಅಂಡ, ಪಿಂಡ, ಉದ್ಭಿಜಗಳು ಇಲ್ಲದಿರುವಾಗ ಆ ಮೂರನ್ನು ಒಂದು ದೊಡ್ಡ ಅಂಡದಿಂದ ನೇರವಾಗಿ ಹುಟ್ಟಿಸುವುದು ನಡೆದಿದೆ. ದೊಡ್ಡ ಮೊಟ್ಟೆಯನ್ನು ಬ್ರಹ್ಮ+ಅಂಡ ಎಂದು ಹೇಳುತ್ತಾರೆ. ಬ್ರಹ್ಮ+ಅಂಡವನ್ನು ಸೇರಿಸಿ

ಬ್ರಹ್ಮಾಂಡವೆಂದು ಹೇಳಬಹುದು. ಬ್ರಹ್ಮಾಂಡವನ್ನು ದೇವರು ಸೃಷ್ಠಿಸಿದ್ದಾನೆ. ದೇವರ ಸೃಷ್ಟಿಯಾದ ಬ್ರಹ್ಮಾಂಡದ ಮೂಲಕ ಮೂರು ವಿಧಗಳ ಜನ್ಮಗಳಿರುವ ಮನುಷ್ಯರು, ಪಕ್ಷಿಗಳು, ವೃಕ್ಷಗಳು ಹುಟ್ಟಿವೆ. ಮನುಷ್ಯರೇ ಅಲ್ಲದೇ ಮನುಷ್ಯರ ಜೊತೆಯಲ್ಲಿ ಪಿಂಡಗಳಾಗಿ ಪ್ರಾಣಿಗಳು ಹುಟ್ಟಿವೆ. ಪಿಂಡಗಳು ಮನುಷ್ಯರು ಮತ್ತು ಪ್ರಾಣಿಗಳೆಂದು ಜೋಡಿಯಾಗಿ ಹೇಳಬಹುದು. ಹಾಗೆಯೇ ಅಂಡಗಳಲ್ಲಿ ಪಕ್ಷಿಗಳೇ ಅಲ್ಲದೇ ಅವುಗಳ ಜೊತೆಯಲ್ಲಿ ಕ್ರಿಮಿ ಕೀಟಕಗಳು ಪಕ್ಷಿಗಳಿಗೆ ಜೋಡಿಯಾಗಿ ಹುಟ್ಟಿವೆ. ಉದ್ಭಿಜಗಳಲ್ಲಿ ವೃಕ್ಷಗಳೇ ಅಲ್ಲದೇ ಅವುಗಳಿಗೆ ಜೋಡಿಯಾಗಿ ಬಳ್ಳಿಗಳು ಹುಟ್ಟಿವೆ. ಈ ವಿಧವಾಗಿ ಮೂರು ವಿಧಗಳ ಜೀವರಾಶಿಗಳ ಸೃಷ್ಟಿ ಮೊದಲು ದೇವರು ತನ್ನ ಬ್ರಹ್ಮಾಂಡದ ಮೂಲಕ ತಯಾರಿ ಮಾಡಿದ್ದಾನೆ. ಸೃಷ್ಟಿ ಏನೂ ಇಲ್ಲದಿರುವಾಗ ದೇವರೇ ಸ್ವತಃವಾಗಿ ತನ್ನ ಬ್ರಹ್ಮಾಂಡದಿಂದ ಶಿಶು ದಶೆಯಿಲ್ಲದ, ಬಾಲ್ಯದಶೆ ಇಲ್ಲದ ಮೂರು ವಿಧಗಳ ಜೀವಿಗಳನ್ನು ಸೃಷ್ಠಿಸಿದ್ದಾನೆ. ಹಾಗೆ ಸೃಷ್ಠಿ ನಡೆದ ನಂತರ ಆಗ ಸೃಷ್ಠಿಸಲ್ಪಟ್ಟಿರುವ ಜೀವರಾಶಿಗಳೇ ಉಳಿದ ತಮ್ಮ ಜಾತಿ ಜೀವರಾಶಿಗಳಿಗೆ ತಾಯಿತಂದೆಯರಾಗಿ ಬದಲಾಗುವಂತೆ ದೇವರು ಮಾಡಿದ್ದಾನೆ. ಮೊದಲು ಸೃಷ್ಠಿ ನಂತರ ದೇವರು ಯಾವ ಕಾರ್ಯವನ್ನು (ಕೆಲಸವನ್ನು) ಮಾಡಲಿಲ್ಲ. ದೇವರ ನಂತರವಿರುವ ಆತ್ಮವೇ ಎಲ್ಲದಕ್ಕು ತಾಯಿತಂದೆಯರಾಗಿ ಅಗೋಚರವಾಗಿದ್ದೂ, ಮೇಲ್ನೋಟಕ್ಕೆ ಕಾಣಿಸುವ ತಾಯಿತಂದೆಯರನ್ನು ಸಂತಾನಕ್ಕೆ ಕಾರಣವಾದಂತೆ ತೋರುತ್ತಿದೆ. ಹಾಗೆಯೇ ಅಂದುಕೊಂಡರೇ ಕಾಣಿಸುವ ಅವುಗಳ ತಾಯಿತಂದೆಯರಿಂದ ಉಳಿದ ಮೂರು ವಿಧಗಳ ಜೀವರಾಶಿಗಳು ಹುಟ್ಟುತ್ತಿವೆ.

ಇದೆಲ್ಲವೂ ಜೀವರಾಶಿಗಳ ಹುಟ್ಟುವಿಕೆಯೊಂದರ ಸೃಷ್ಠಿ ರಹಸ್ಯವನ್ನು ತಿಳಿದುಕೊಂಡಿದ್ದೇವೆ. ಅದನ್ನನುಸರಿಸಿ ಯಾವ ಭಾಷೆ ಇಲ್ಲದಿರುವಾಗ ಮೊದಲ ಭಾಷೆ ಹೇಗೆ ಬಂದಿದೆಯೋ, ನಂತರ ಆ ಭಾಷೆಗೆ ಉಳಿದ ಭಾಷೆಗಳು ಹೇಗೆ ಹುಟ್ಟಿವೆಯೋ ಈಗ ತಿಳಿದುಕೊಳ್ಳೋಣ. ಅಂಡ, ಪಿಂಡ, ಉದ್ಭಿಜಗಳ ಸೃಷ್ಠಿ ನಂತರ 1) ಮನುಷ್ಯರು, ಪ್ರಾಣಿಗಳು, 2) ಪಕ್ಷಿಗಳು, ಕೀಟಕಗಳು, 3) ವೃಕ್ಷಗಳು,

ಬಳ್ಳಿಗಳು ಮೂರು ಜೋಡಿ ಜಾತಿಗಳು ಹುಟ್ಟಿದಂತೆ ತಿಳಿದುಕೊಂಡಿದ್ದೇವೆ. ಮನುಷ್ಯರ ಸೃಷ್ಠಿ ಆದ ಸ್ವಲ್ಪ ಕಾಲಕ್ಕೆ ಕೃತಯುಗದಲ್ಲಿಯೇ ಮೊದಲು ಮನುಷ್ಯರಿಗೆ ದೇವರು ಜ್ಞಾನವನ್ನು ತಿಳಿಸುವ ನಿಮಿತ್ತ ತನ್ನ ಪ್ರಕೃತಿಯಲ್ಲಿ ಮೊದಲನೆಯದಾದ ಆಕಾಶದ ಮೂಲಕ ತಿಳಿಸಿದ್ದಾನೆ. ದೇವರ ನಂತರ ದೇವರಾಗಿ ಹೇಳಲ್ಪಡುತ್ತಿರುವ ಆತ್ಮವೇ ಆ ಕೆಲಸವನ್ನು ಮಾಡಿದೆ. ಆತ್ಮ ಮಾಡುತ್ತಿರುವ ಪ್ರತಿ ಕೆಲಸವನ್ನು ದೇವರೇ ಮಾಡುತ್ತಿದ್ದಾನೆಂದು ಹೇಳುವುದು ಸಹಜವಾಗಿರುತ್ತದೆ. ಆದರೇ ಸೃಷ್ಠಿ ನಂತರ ದೇವರು ಏನು ಮಾಡದೆ ಸುಮ್ಮನೆ ಇದ್ದುಹೋಗಿದ್ದಾನೆ. ಸೃಷ್ಟಿಯಲ್ಲಿ ನಡೆಯಬೇಕಾದ ಕಾರ್ಯಗಳೆಲ್ಲವನ್ನು ತನ್ನ ಪುತ್ರನಾದ ಆತ್ಮವೇ ಮಾಡುವಂತೆ ಅಧಿಕಾರಕೊಟ್ಟು ತಾನು ಸುಮ್ಮನಿದ್ದು ಹೋಗಿದ್ದಾನೆ. ದೇವರು ಸಾಕ್ಷಿಯಾಗಿರುವಾಗ ಆತ್ಮವೇ ಎಲ್ಲಾ ಮಾಡುತ್ತಿದೆ. ಮನುಷ್ಯ ಮರಣಿಸಿದ ನಂತರ ಜನ್ಮಕ್ಕೆ ಕಳುಹಿಸುವುದಾಗಲೀ, ಮೋಕ್ಷಕ್ಕೆ ಕಳುಹಿಸುವುದಾಗಲೀ ಆತ್ಮವೇ ಅಧಿಕಾರವನ್ನು ದೇವರಿಂದ ಪಡೆದಿದೆ. ಸೃಷ್ಠಿ ಆದಿಯಲ್ಲಿಯೇ ಆತ್ಮಕ್ಕೆ ಅಧಿಕಾರ ಕೊಟ್ಟಿರುವ ದೇವರು ತಾನು ಸಾಕ್ಷಿಯಾಗಿ ಮೌನವಾಗಿ ನೋಡುತ್ತಿದ್ದಾನೆ. ಆತ್ಮ ಮನುಷ್ಯರಿಂದ ಮನುಷ್ಯರನ್ನು, ಪ್ರಾಣಿಗಳಿಂದ ಪ್ರಾಣಿಗಳನ್ನು, ಪಕ್ಷಿಗಳ ಅಂಡದಿಂದ ಪಕ್ಷಿಗಳನ್ನು, ವೃಕ್ಷಗಳ ಬೀಜಗಳಿಂದ ವೃಕ್ಷಗಳನ್ನು ಹುಟ್ಟಿಸುತ್ತಿದೆ. ಆದರೂ ತಾನು ಏನೂ ಮಾಡದಂತೆ ಎಲ್ಲೂ ಯಾರಿಗೂ ತಿಳಿಯದೇ ಇದೆ. ತಿಳಿಯದೆ ಶರೀರದಲ್ಲಿ ಅಡಗಿರುವ ಆತ್ಮನನ್ನು ತಿಳಿಯುವುದೇ **ಆತ್ಮಜ್ಞಾನ** ಎಂದೂ, **ಆಧ್ಯಾತ್ಮಿಕ** ಎಂದೂ ಹೇಳುತ್ತೇವೆ.

ದೇವರು ಕೆಲಸ ಮಾಡದವನಾಗಿ ಸುಮ್ಮನಿರುವಾಗ, ಆತ್ಮವೇ ಮನುಷ್ಯರಿಗೆ ಜ್ಞಾನವನ್ನು ತಿಳಿಸುವುದಕ್ಕೆ ಸಜ್ಜಾಗಿ ಮೊದಲು ಆಕಾಶದ ಮೂಲಕ ತನ್ನ ಜ್ಞಾನವನ್ನು, ದೇವರ ಜ್ಞಾನವನ್ನು ತಿಳಿಸಬೇಕೆಂದುಕೊಂಡಿದೆ. ಆಕಾಶದ ಮೂಲಕ ಜ್ಞಾನವನ್ನು ಆತ್ಮ ಹೇಳುವುದಾಗಿದೆ. ಆಕಾಶದ ಮೂಲಕ ಶಬ್ಧರೂಪದಲ್ಲಿ ಜ್ಞಾನವು ವಿಶ್ವದಲ್ಲಿ ಮೊಟ್ಟಮೊದಲಿಗೆ ಹೊರಬಂದಿದೆ. ಮೊದಲು ಹೇಳಲ್ಪಟ್ಟಿರುವ ದೇವರ ಜ್ಞಾನವನ್ನು ಆಕಾಶ ಶಬ್ಧದ ಮೂಲಕ ಆತ್ಮ ಹೇಳಿಸಿದರೇ, ಆ ಶಬ್ಧವು ಆಕಾಶದಿಂದ ಗುಡುಗಿನ ರೂಪದಲ್ಲಿ ಹೊರಗೆ ಬಂದಿದೆ. ಗುಡುಗಿನ ಶಬ್ಧ

ರೂಪದಲ್ಲಿ ಬಂದಿರುವುದು ದೈವಜ್ಞಾನವೇ ಆದರೂ, ಅದನ್ನು ಅರ್ಥ ಮಾಡಿಕೊಳ್ಳುವ ಸಾಮರ್ಥ್ಯ ಮನುಷ್ಯರಿಗಿಲ್ಲ. ಗುಡುಗಿನಲ್ಲಿರುವ ಉದ್ದೇಶವು ಪ್ರಜೆಗಳಿಗೆ ಜ್ಞಾನ ತಿಳಿಸುವುದೇ ಆದರೂ, ಗುಡುಗಿನ ಭಾಷೆ ಮನುಷ್ಯರಿಗೆ ಅರ್ಥವಾಗದೆ ಇರುವುದರಿಂದ, ಮನುಷ್ಯರಿಗೆ ಗುಡುಗಿನ ಮೂಲಕ ಹೇಳಲ್ಪಟ್ಟ ಜ್ಞಾನವು ಒಂದು ಮಾತೂ ಸಹ ಅರ್ಥವಾಗಲಿಲ್ಲ. ಆದರೇ ಗುಡುಗಿನ ಶಬ್ಧದಲ್ಲಿನ ಜ್ಞಾನವನ್ನು ಆಕಾಶದಲ್ಲಿನ ಸೂರ್ಯಗ್ರಹವು ಆಲಿಸಿಕೊಂಡಿದೆ. ಗುಡುಗಿನ ಶಬ್ಧವನ್ನು ಆಲಿಸಿದ ಸೂರ್ಯನು ಆ ಶಬ್ಧಗಳಲ್ಲಿನ ಜ್ಞಾನವನ್ನು ಪೂರ್ತಿಯಾಗಿ ಗ್ರಹಿಸಿಕೊಂಡಿದ್ದಾನೆ. ತಾನು ಗ್ರಹಿಸಿಕೊಂಡ ಜ್ಞಾನವನ್ನು, ಮನುಷ್ಯರು ತಿಳಿದ ಭಾಷೆಯೊಳಗೆ ಬದಲಾಯಿಸಿ (ಅನುವಾದ ಮಾಡಿ) ಮನುಷ್ಯರಿಗೆ ಹೇಳಲು ಬಯಸಿದನು. ಆ ಪ್ರಯತ್ನದಲ್ಲಿನ ಭಾಗವಾಗಿ ಮೊಟ್ಟಮೊದಲು ದಕ್ಷಿಣ ಭಾರತದೇಶದಲ್ಲಿರುವ "ಮನುವು" ಎಂಬ ವ್ಯಕ್ತಿಗೆ ಆಕಾಶದಿಂದ ಬಂದಿರುವ ಜ್ಞಾನವನ್ನು ಹೇಳಿದನು.

**8) ಪ್ರಶ್ನೆ :– ಸೃಷ್ಠಿ ಆದಿಯಲ್ಲಿ ಸ್ವಲ್ಪ ಕಾಲ ಕಳೆದರೂ ಆಗ ಇರುವ ಮನುಷ್ಯರಿಗೆ ನಾಗರಿಕತೆ ಗೊತ್ತಿಲ್ಲ. ಆ ಕಾಲದಲ್ಲಿ ಮನುಷ್ಯರಲ್ಲಿಯೇ ಅಲ್ಲದೇ ಭೂಮಿಮೇಲೆ ಎಲ್ಲೂ 'ಭಾಷೆ' ಎನ್ನುವುದಿಲ್ಲ. ಆ ಕಾಲದಲ್ಲಿ ಆಕಾಶವಾಣಿ ಹೇಳಿರುವ ಜ್ಞಾನ ಭಾವನೆಯಿಂದ ಕೂಡಿಕೊಂಡಿರುವ ಶಬ್ಧವಾದ್ದರಿಂದ ಅದು ಆಕಾಶವೊಂದರ ಭಾಷೆಯೆಂದು ಹೇಳಬಹುದು. ಆಕಾಶವು ತನ್ನ ಭಾಷೆಯಲ್ಲಿ, ತನ್ನ ಭಾವನೆಯನ್ನು ತಿಳಿಸಿದಾಗ ಅದನ್ನು ಮನುಷ್ಯರು ಆಲಿಸಿದರೂ, ಯಾರಿಗೂ ತಿಳಿಯದ ಭಾಷೆಯಾಗಿರುವುದರಿಂದ ಆ ಭಾವನೆಯಲ್ಲಿರುವುದು ದೇವರ ಜ್ಞಾನವೇ ಆದರೂ, ಅದು ಮನುಷ್ಯರಿಗೆ ಸ್ವಲ್ಪವೂ ಅರ್ಥವಾಗಲಿಲ್ಲ. ಹಾಗಿರುವಾಗ ಆಕಾಶ ಹೇಳಿರುವ ಭಾಷೆಯಲ್ಲಿನ ಜ್ಞಾನವನ್ನು ಸೂರ್ಯನು ಹೇಗೆ ಗ್ರಹಿಸಿ, ಅರ್ಥ ಮಾಡಿಕೊಂಡಿದ್ದಾನೆ? ಅಲ್ಲಿಯವರೆಗು ಭೂಮಿಮೇಲೆ ಮನುಷ್ಯರ ಮಧ್ಯದಲ್ಲಿ ಮಾತನಾಡುವ ಭಾಷೆಯೇ ಇಲ್ಲ. ಆಕಾಶದಲ್ಲಿ ಭಾವನೆಯೊಂದಿಗೆ ಕೂಡಿರುವ ಭಾಷೆಯಾಗಿ ಬಂದಿರುವುದು ಮೊಟ್ಟಮೊದಲು ಗುಡುಗಿನ ಶಬ್ಧವೇ ಎಂದು ಹೇಳಬಹುದು. ಮೊದಲು ಬಂದಿರುವ**

**ಭಾಷೆಯಾಗಿರುವುದರಿಂದ ಅದು ಸೂರ್ಯನಿಗೆ ಕೂಡಾ ತಿಳಿದಿಲ್ಲ. ತಿಳಿಯದ ಭಾಷೆಯಲ್ಲಿನ ಜ್ಞಾನವನ್ನು ಸೂರ್ಯನು ಹೇಗೆ ಗ್ರಹಿಸಿದ್ದಾನೆ? ಮೊದಲು ಬಂದಿರುವ ಆಕಾಶ ಭಾಷೆ ಸೂರ್ಯನಿಗೆ ತಿಳಿಯದಿದ್ದರೂ ಹೇಗೆ ಗ್ರಹಿಸಲ್ಪಟ್ಟಿದ್ದಾನೆ.?**

**ಉತ್ತರ :–** ವಿಶ್ವವನ್ನು ಸೃಷ್ಠಿಸಿದ ಸೃಷ್ಠಿಕರ್ತನಾದ ದೇವರು ತನ್ನ ಸೃಷ್ಠಿ ಶಾಶ್ವತವಾಗಿ ಮುಂದುವರೆಯುವುದಕ್ಕೆ ತಕ್ಕ ವಿಧಾನವನ್ನು ಸೃಷ್ಠಿಯಲ್ಲಿ ಏರ್ಪಡಿಸಿದ್ದಾನೆ. ತನ್ನ ಯೋಜನೆಯ ಪ್ರಕಾರ **ಪಾಲಿಸುವ ಜೀವಿಗಳು, ಪಾಲಿಸಲ್ಪಡುವ ಜೀವಿಗಳು** ಎಂದು ಎರಡು ವಿಧಗಳಾಗಿ ಜೀವಿಗಳನ್ನು ತಯಾರಿ ಮಾಡಿದ್ದಾನೆ. ಅದರಲ್ಲಿ ಪಾಲಿಸಲ್ಪಡುವವರು ಒಂದು ವಿಭಾಗವಾದರೆ, ಪಾಲಿಸುವವರು ಮತ್ತೊಂದು ವಿಭಾಗವಾಗಿದ್ದಾರೆ. ಪಾಲಿಸಲ್ಪಡುವ ಜೀವಿಗಳೆಲ್ಲ ಅಂಡಜ, ಪಿಂಡಜ, ಉದ್ಭಿಜಗಳಾಗಿ ಇವೆ. ಪಾಲಿಸುವ ಜೀವಿಗಳು ಅಂಡದಿಂದಾಗಲೀ, ಪಿಂಡದಿಂದಾಗಲೀ, ಉದ್ಭಿಜದಿಂದಾಗಲೀ ಹುಟ್ಟುವುದಿಲ್ಲ. ಅವರಿಗೆ ಮನುಷ್ಯರ ಹಾಗೆ ಜನ್ಮಗಳು, ಮರಣಗಳು ಇರುವುದಿಲ್ಲ. ಸೃಷ್ಠಿ ಯೊಂದಿಗೆ ಬ್ರಹ್ಮಾಂಡದಿಂದ ಹುಟ್ಟಿರುವ ಪಾಲಕರು ಸ್ಥಿರಸ್ಥಾಯಿಯಾಗಿದ್ದು ದೇವರು ಒಪ್ಪಿಸಿರುವ ಕೆಲಸವನ್ನು ಮಾಡುತ್ತಿರುತ್ತಾರೆ. ಮನುಷ್ಯರು, ಪ್ರಾಣಿಗಳು, ಪಕ್ಷಿಗಳು, ಕೀಟಕಗಳು, ವೃಕ್ಷಗಳು, ಲತೆಗಳು (ಬಳ್ಳಿಗಳು) ಎನ್ನುವವೇ ಅಲ್ಲದೇ ಸಮುದ್ರ ಜೀವಿಗಳೊಂದಿಗೆ ಸಹ ಸತ್ತುಹುಟ್ಟುತ್ತಿರುತ್ತವೆ. ಆದರೇ ಮಹಾಭೂತಗಳಾಗಿ, ಭೂತಗಳಾಗಿ, ಗ್ರಹಗಳಾಗಿ, ಉಪಗ್ರಹಗಳಾಗಿ ಇರುವ ಜೀವಿಗಳಿಗೆ ಸಾವುಹುಟ್ಟುಗಳಾಗಲೀ, ಸುಖದುಃಖ ಗಳಾಗಲೀ ಇಲ್ಲ. ದೇವರ ಸೇವೆಯ ನಿಮಿತ್ತ ಎಂದರೆ ದೇವರ ಪರಿಪಾಲನೆ ನಿಮಿತ್ತ ಭೂತಗಳು, ಗ್ರಹಗಳು ಎಂಬ ಎರಡು ವಿಧಗಳಾದವರು ತಯಾರಿ ಮಾಡಲ್ಪಟ್ಟಿದ್ದಾರೆ.

ಭೂತಗಳಿಗೆ, ಗ್ರಹಗಳಿಗೆ ಶರೀರಗಳಿವೆ. ಆದರೂ ಅವು ಹೆಸರಿಗೆ ಮಾತ್ರವೇ ಇರುವುದರಿಂದ ಆ ಶರೀರದಲ್ಲಿ ಗ್ರಹಗಳು ಭೂತಗಳು ಇರಬಹುದು, ಇಲ್ಲದೇ ಹೋಗಬಹುದು. ಪಾಲನಾ ನಿಮಿತ್ತವಾಗಿ ಗ್ರಹಗಳು, ಭೂತಗಳು ಕೆಲವು ಸಮಯಗಳಲ್ಲಿ ಶರೀರವನ್ನು ಬಿಟ್ಟು ಹೊರಗೆ ಬರಬೇಕಾಗಿರುತ್ತದೆ.

ಹಾಗೆ ಬಂದರೂ ಅವರ ಶರೀರಗಳು ನಾಶವಾಗದೆ ಇರುತ್ತವೆ. ಭೂತಗಳಿಗೆ, ಗ್ರಹಗಳಿಗೆ ಅನೇಕ ಆಕಾರಗಳಲ್ಲಿ ಶರೀರಗಳಿರುತ್ತವೆ. ಮನುಷ್ಯರ ಹಾಗೆ ಅಲ್ಲದೆ ಭೂತಗಳು ದೂರಶ್ರವಣ, ದೂರದೃಷ್ಟಿ ಹೊಂದಿರುವುದೇ ಅಲ್ಲದೇ ವೇಗವಂತ ವಾದ ಪ್ರಯಾಣವನ್ನು ಕೂಡಾ ಮಾಡಬಲ್ಲವು. ಆದ್ದರಿಂದ ಸೂರ್ಯನು ಆಕಾಶದಲ್ಲಿ ಎಷ್ಟೋ ದೂರದಿಂದ ಬಂದು ಮನುವಿಗೆ ಕೃತಯುಗದಲ್ಲಿ ಜ್ಞಾನವನ್ನು ಹೇಳಿದ್ದಾನೆ. ಸೂರ್ಯಗ್ರಹವು ತನ್ನ ಸ್ಥೂಲ ಶರೀರವಾದ ಉರಿಯುವ ಗೋಳವನ್ನು ಬಿಟ್ಟು, ಸೂಕ್ಷ್ಮವಾಗಿ ಭೂಮಿಮೇಲಕ್ಕೆ ಬಂದು ಹೇಳಬೇಕಾಗಿರುವ ಜ್ಞಾನವನ್ನು ಹೇಳಿ ಹೋಗಿದ್ದಾನೆ. ಕೃತಯುಗದಲ್ಲಿ ಒಂದುಬಾರಿ, ಕಲಿಯುಗದಲ್ಲಿ ಒಂದುಬಾರಿ ಸೂರ್ಯನು ಭೂಮಿಮೇಲಕ್ಕೆ ಬಂದು ಹೋಗುವುದು ನಡೆದಿದೆ. ಭೂತಗಳಿಗೆ, ಗ್ರಹಗಳಿಗೆ ಕೆಲವು ಪ್ರತ್ಯೇಕತೆಗಳನ್ನು ಕೊಟ್ಟು ದೇವರು ಸೃಷ್ಟಿಸಿದ್ದಾನೆ. ಒಂದು ಶರೀರವನ್ನು ಬಿಟ್ಟು ಎಷ್ಟು ದೂರವಾದರೂ ಬರುವುದು ಒಂದು ಪ್ರತ್ಯೇಕತೆಯಾದರೆ, ಭೂಮಿಮೇಲಾಗಲೀ, ಆಕಾಶದಲ್ಲಾಗಲೀ ಯಾವ ಭಾಷೆಯಲ್ಲಿ ಯಾರು ಮಾತನಾಡುತ್ತಿದ್ದರೂ, ಆ ಭಾಷೆಯಲ್ಲಿನ ಭಾವನೆಯನ್ನು ಗ್ರಹಿಸುವ ಶಕ್ತಿಯು ಕೂಡಾ ದೇವರು ಕೊಟ್ಟಿದ್ದಾನೆ. ಅಂದರೇ ಯಾವ ಭಾಷೆಯನ್ನು ಯಾರು ಮಾತನಾಡಿದರೂ ಆ ಭಾಷೆಯನ್ನು ಗ್ರಹಿಸುವ ಸಾಮರ್ಥ್ಯ ಗ್ರಹಗಳಿಗೆ, ಭೂತಗಳಿಗೆ ಇದೆ. ಇದನ್ನನುಸರಿಸಿ ನೋಡಿದರೆ ಎಲ್ಲಾ ಭಾಷೆಗಳು ಅವರಿಗೆ ತಿಳಿದಿವೆಯೆಂದು ಅವರಿಗೆ ತಿಳಿಯದ ಭಾಷೆಗಳು ಇಲ್ಲವೆಂದು ಹೇಳಬಹುದು. ಈ ಸಾಮರ್ಥ್ಯ ಇರುವುದರಿಂದ ಆಕಾಶ ಶಬ್ಧದಲ್ಲಿನ ಭಾಷೆಯನ್ನು ತಿಳಿದು ಅದರಲ್ಲಿನ ಜ್ಞಾನವನ್ನು ಗ್ರಹಿಸಿ ಮನುಷ್ಯರು ತಿಳಿದ ಭಾಷೆಯಲ್ಲಿ ಸೂರ್ಯನು ಹೇಳಿದ್ದಾನೆ. ಪಾಲನೆಯಲ್ಲಿರುವ ಗ್ರಹಗಳು, ಭೂತಗಳು ಯಾವ ಭಾಷೆ ಯನ್ನಾದರೂ ಆಲಿಸಬಲ್ಲವು. ಯಾವ ಭಾಷೆಯನ್ನಾದರೂ ಮಾತನಾಡಬಲ್ಲವು. ಎಂತಹ ಹೊಸ ಭಾಷೆಯಾದರೂ ಅವರು ಸುಲಭವಾಗಿ ಗ್ರಹಿಸಬಲ್ಲರು, ಹಾಗೆಯೇ ಮಾತನಾಡಬಲ್ಲರು.

ಆದ್ದರಿಂದ ಮೊಟ್ಟಮೊದಲು ಮಾತನಾಡಿದ ಆಕಾಶ ಭಾಷೆಯನ್ನು ಸೂರ್ಯನು ಗ್ರಹಿಸಿದ್ದಾನೆ. ಹಾಗೆಯೇ ಮೊದಲು ಭೂಮಿಮೇಲೆ ಹುಟ್ಟಿರುವ

ತೆಲುಗು ಭಾಷೆಯಲ್ಲಿ ಮಾತನಾಡಿದ್ದಾನೆ. ಸೂರ್ಯನು ಮೊದಲು ಕೇಳಿದ ಭಾಷೆ ಆಕಾಶ ಭಾಷೆ, ಆಕಾಶ ಭಾಷೆ ಗುಡುಗಿನ ಶಬ್ಧದಿಂದ ಕೂಡಿಕೊಂಡಿದೆ. ಭೂಮಿಮೇಲೆ ಮೊಟ್ಟಮೊದಲು ಹುಟ್ಟಿರುವ ಭಾಷೆ ತೆಲುಗು ಭಾಷೆ. ಸೂರ್ಯನು ಮಾತನಾಡಿದ ಮೊದಲ ಭಾಷೆ ತೆಲುಗು ಭಾಷೆಯೇ. ಮನುಷ್ಯರಾದ ನಮಗೆ ತಿಳಿದ ಭಾಷೆಯನ್ನು ಗ್ರಹಗಳು, ಭೂತಗಳು ಸುಲಭವಾಗಿ ತಿಳಿಯುವವು, ಮಾತನಾಡುವವು. ಭೂಮಿಮೇಲೆ ಮೊಟ್ಟಮೊದಲು ಕೃತಯುಗದಲ್ಲಿಯೇ ಮನುಷ್ಯರು ಸ್ವಲ್ಪ ಬುದ್ಧಿಯನ್ನು ಉಪಯೋಗಿಸಿ ಭಾವನೆಗಳನ್ನು ಒಬ್ಬರಿಗೊಬ್ಬರು ತಿಳಿಸುವ ನಿಮಿತ್ತ ಭಾಷೆಯನ್ನು ಏರ್ಪಡಿಸಿಕೊಂಡಿದ್ದಾರೆ. ಹಾಗೆ ಏರ್ಪ ಡಿಸಿಕೊಂಡ ಭಾಷೆಯೇ ತೆಲುಗು ಭಾಷೆ. ತೆಲುಗು ಭಾಷೆ ಸೃಷ್ಠಿಯಲ್ಲಿ ಮೊದಲು ತಯಾರಾಗಿರುವಾಗ ನಂತರ ಸ್ವಲ್ಪಕಾಲಕ್ಕೆ ಅದನ್ನು ಅನುಸರಿಸಿ ದಕ್ಷಿಣ ಭಾರತ ದೇಶ ಭಾಷೆಗಳಾದ ಕನ್ನಡ, ತಮಿಳು, ಮಲಯಾಳ, ಮರಾಠೀ, ಒರಿಯಾ ಭಾಷೆಗಳು ತಯಾರಾಗಿವೆ. ನಂತರ ಒಂದಕ್ಕೊಂದು ಮಾತೃಭಾಷೆಯಾಗಿದ್ದೂ ಉಳಿದ ಭಾಷೆಗಳು ತಯಾರಾಗುತ್ತಾ ಬಂದಿವೆ. ಆ ವಿಧವಾಗಿ ತಯಾರಾಗುತ್ತಾ ಇಂದಿಗೆ ಪ್ರಪಂಚದಲ್ಲಿ 7105 ಭಾಷೆಗಳಿದ್ದಂತೆ ಗುರುತಿಸಿದ್ದಾರೆ. ಇದರಲ್ಲಿ ಲಿಪಿ ಇರುವವು 3570 ಭಾಷೆಗಳಾಗಿರುವಾಗ, ಉಳಿದವೆಲ್ಲಾ ಲಿಪಿ ಇಲ್ಲದವುಗಳ ಹಾಗೆಯೇ ಲೆಕ್ಕಿಸಬೇಕು. ನಮಗೆ ತೆಲುಗು ಹೊರತುಪಡಿಸಿ ಇತರ ಭಾಷೆಗಳು ತಿಳಿದಿಲ್ಲ. ಕೆಲವರಿಗೆ ಎರಡರಿಂದ ಹತ್ತು ಭಾಷೆಗಳು ಬಂದಿರುವವರು ಕೂಡಾ ಇದ್ದಾರೆ. ಹತ್ತು ಅಥವಾ ಹದಿನೈದು ಭಾಷೆಗಳಿಗಿಂತ ಹೆಚ್ಚು ಭಾಷೆಗಳು ಬಂದಿರುವ ಮನುಷ್ಯರು ಯಾರೂ ಇಲ್ಲ. ಆದರೇ ಗ್ರಹಗಳಾಗಲೀ, ಭೂತಗಳಾಗಲೀ ಭೂಮಿಮೇಲಿರುವ ಮನುಷ್ಯರು ಮಾತನಾಡುವ 7105 ಭಾಷೆಗಳನ್ನು ಅರ್ಥ ಮಾಡಿಕೊಳ್ಳುವರು, ಮಾತನಾಡಬಲ್ಲರು. ದೇವರು ಸೃಷ್ಠಿಸಿರುವ ತನ್ನ ಪಾಲಕರಿಗೆ ದೇವರು ಎಲ್ಲಾ ಭಾಷೆಗಳನ್ನು ಗ್ರಹಿಸುವ ಶಕ್ತಿಯನ್ನು ಕೊಟ್ಟಿದ್ದಾನೆ. ದೇವರಿಂದ ಸೃಷ್ಠಿಸಲ್ಪಟ್ಟಿರುವ ಭೂತಗಳಿಗೆ, ಗ್ರಹಗಳಿಗೆ ಭೂಮಿಮೇಲೆ ಎಲ್ಲಾ ಭಾಷೆಗಳನ್ನು ಗ್ರಹಿಸುವ ಶಕ್ತಿಯನ್ನು ದೇವರು ಕೊಟ್ಟಿದ್ದಾನೆ. ದೇವರು ಸೃಷ್ಠಿಸಿರುವ ಮನುಷ್ಯನಿಗೆ ಮಾತ್ರ ಭಾಷೆಗಳು ಕಲಿಸಿದರೇ ಹೊರತು ತಿಳಿಯುವುದಿಲ್ಲ. ಅದೇ ದೇವರು

ಸೃಷ್ಟಿಸಿರುವ ಪಾಲಕರಾದ ಭೂತಗಳಿಗೆ, ಗ್ರಹಗಳಿಗೆ ಕಲಿಸದಿದ್ದರೂ ಭಾಷೆಗಳೆಲ್ಲಾ ತಿಳಿಯುವಂತೆ ಮಾಡಿದ್ದಾನೆ. ಆದ್ದರಿಂದ ಗ್ರಹಗಳು ಭೂತಗಳು ಎಲ್ಲಾ ಭಾಷೆಗಳನ್ನು ಕೇಳಿ ತಿಳಿಯುವಂತೆ, ತಿಳಿದು ಮಾತನಾಡುವಂತೆ ಮಾಡಿದ್ದಾನೆ. ತನ್ನ ಪ್ರತಿನಿಧಿಯಾದ ಆತ್ಮ ವಿಷಯಕ್ಕೆ ಬಂದರೇ ಭಾಷೆಗಳೊಂದಿಗೆ ಸಂಬಂಧವಿಲ್ಲದೇ ನೇರವಾಗಿ ಭಾವನೆಯನ್ನು ಗ್ರಹಿಸುವ ವಿಧಾನವನ್ನು ತಿಳಿಸಿದ್ದಾನೆ. ತನ್ನೊಂದಿಗೆ ತೀರ್ಪು ನಿರ್ಣಯಿಸುವ ಅಧಿಕಾರವನ್ನು ತನ್ನ ಕುಮಾರನಾದ ಆತ್ಮಕ್ಕೆ ಕೊಟ್ಟಂತೆ, ತನಗಿರುವ ಭಾವನೆಯನ್ನು ಗ್ರಹಿಸುವ ಅಧಿಕಾರವನ್ನು ತನ್ನ ಆತ್ಮಗೆ ಕೂಡಾ ದೇವರು ಕೊಟ್ಟಿದ್ದಾನೆ. ದೇವರಿಗೆ ಭಾಷೆಗಳೊಂದಿಗೆ ಕೆಲಸವಿಲ್ಲದೇ ಯಾರ ಭಾವನೆಯನ್ನಾದರೂ ಗ್ರಹಿಸುವ ಅಧಿಕಾರವಿದೆ. ಆದ್ದರಿಂದ ಮನುಷ್ಯರ ಅಂತರಂಗದಲ್ಲಿನ ಭಾವನೆಗಳನ್ನು ಮನುಷ್ಯ ಹೇಳದೇನೆ ದೇವರು ಗ್ರಹಿಸಬಲ್ಲನು. ಮನುಷ್ಯನ ಹೃದಯಾಂತರಾಳದಲ್ಲಿನ ರಹಸ್ಯವನ್ನು ಕೂಡಾ ದೇವರು ಗ್ರಹಿಸಬಲ್ಲನು. ಅದೇ ವಿಧಾನವನ್ನೇ ತನ್ನ ಕುಮಾರನಾದ ಆತ್ಮಗೆ ಅನುಗ್ರಹಿಸಿರುವುದರಿಂದ ಮನುಷ್ಯ ಹೊರಗೆ ಹೇಳದೇನೇ ಅಂತರಂಗದಲ್ಲಿ ರಹಸ್ಯವಾಗಿ ಇರಿಸಿಕೊಂಡ ವಿಷಯವನ್ನು ಆತ್ಮ ಕೂಡಾ ಸುಲಭವಾಗಿ ತಿಳಿಯುವುದು.

ಭಾವನೆಯನ್ನು ತಿಳಿಯುವುದರಲ್ಲಿ ಮನುಷ್ಯರನ್ನು ಒಂದು ವಿಧ, ಭೂತಗಳನ್ನು, ಗ್ರಹಗಳನ್ನು ಮತ್ತೊಂದು ವಿಧ, ದೇವರು ಆತ್ಮ ಇನ್ನೊಂದು ವಿಧ ಒಟ್ಟು ಮೂರು ವಿಧಗಳಿರುವಂತೆ ತಿಳಿಯುತ್ತಿದೆ. ಮನುಷ್ಯ ಕಲಿತರೇ ಹೊರತು ಭಾಷೆಯನ್ನು ತಿಳಿಯುವುದಿಲ್ಲ. ಆದ್ದರಿಂದ ದೇವರು ಸೃಷ್ಟಿಸಿರುವ ಪಾಲಿಸಲ್ಪಡುವವರೆಲ್ಲರಲ್ಲಿಯೂ ಭಾಷೆಯನ್ನು ಕಲಿತರೇ ತಿಳಿಯುವುದು ಒಂದು ವಿಧ, ದೇವರು ಸೃಷ್ಟಿಸಿರುವ ಪಾಲಕರೆನ್ನಲ್ಪಡುವವರೆಲ್ಲರಲ್ಲಿಯೂ ಭಾಷೆಯನ್ನು ಕಲಿಸದೇ ಹೋದರೂ ತಿಳಿಯುವುದು ಒಂದು ವಿಧ, ಕೊನೆಯಲ್ಲಿ ದೇವರಿಂದ ಸೃಷ್ಟಿಸಲ್ಪಟ್ಟಿರುವ ತನ್ನ ಪ್ರತಿನಿಧಿಯಾದ ಆತ್ಮ ಮತ್ತು ದೇವರಾದ ತಾನು ಇಬ್ಬರು

ಭಾಷೆಯಿಂದ ನಿಮಿತ್ತವಿಲ್ಲದೇ ನೇರವಾಗಿ ಭಾವನೆಯನ್ನು ಗ್ರಹಿಸುವುದು ಒಂದು ವಿಧ ಒಟ್ಟು ಮೂರು ವಿಧಗಳು ದೇವರು ನಿರ್ಮಿಸಿದ್ದಾನೆ. ಈ ವಿಧಾನ ಸೃಷ್ಠಿ ಆದಿಯಿಂದ ಸಾಗುತ್ತಿದೆ. ಇದು ದೇವರು ನಿರ್ಣಯಿಸಿರುವ ವಿಧಾನವಾದ್ದರಿಂದ ಇದನ್ನು ಯಾರೂ ಅತಿಕ್ರಮಿಸುವುದಕ್ಕೆ ಅವಕಾಶವಿಲ್ಲ. ದೇವರು ಮಾಡಿರುವ ಈ ವಿಧಾನವನ್ನು ಅನುಸರಿಸಿ ಸೂರ್ಯನು ಆಕಾಶ ಶಬ್ಧವಾದ ಗುಡುಗಿನ ಭಾಷೆಯನ್ನು ಗ್ರಹಿಸಿದ್ದಾನೆ. ಗುಡುಗಿನ ಭಾಷೆಯಲ್ಲಿನ ಭಾವನೆಯನ್ನು ಪೂರ್ತಿಯಾಗಿ ತಿಳಿದಿದ್ದಾನೆ. ತಾನು ತಿಳಿದಿರುವ ಭಾವನೆಯನ್ನು ಪುನಃ ಮನುಷ್ಯರ ಭಾಷೆಯಲ್ಲಿ ತಿಳಿಸಿದ್ದಾನೆ.

**9) ಪ್ರಶ್ನೆ :– ಮನುಷ್ಯರ ಭಾಷೆಗಳು ಪೂರ್ವದಲ್ಲಿ ಒಂದರೊಂದಿಗೆ ಆರಂಭವಾಗಿ, ಅದರ ಮೂಲಕ ಅನೇಕ ಭಾಷೆಗಳು ತಯಾರಾಗಿವೆ ಎಂದು ಹೇಳಿದ್ದೀರಿ. ಆದರೇ ಹಾಗೆ ತಯಾರಾದ ಭಾಷೆಗಳು ಈದಿನ 7105 ಇವೆಯೆಂದು ಕೂಡಾ ಹೇಳಿದ್ದೀರ. ಮೊದಲು ತಯಾರಾದ ಭಾಷೆ ತೆಲುಗು ಭಾಷೆಯೆಂದು ಹೇಳಿದ್ದೀರ. "ಭೂಮಿಮೇಲೆ ತೆಲುಗು ಭಾಷೆ ಕೂಡಾ ಇಲ್ಲದ ಸಮಯದಲ್ಲಿ ಆಕಾಶವು ತನ್ನ ಮೇಘಗಳಿಂದ ಶಬ್ಧ ಮಾಡಿ, ತನ್ನ ಭಾವನೆಯನ್ನು ಗುಡುಗಿನ ಶಬ್ಧ ಭಾಷೆಯಿಂದ ತಿಳಿಸಿದೆ" ಎಂದು ಹೇಳಿದ್ದೀರಿ. ನೀವು ಹೇಳಿರುವ ಪ್ರಕಾರ ತೆಲುಗು ಭಾಷೆ ಹುಟ್ಟುವುದಕ್ಕಿಂತ ಮೊದಲೇ ಆಕಾಶ ಭಾಷೆ ಹುಟ್ಟಿದ್ದರೇ ಅದನ್ನು ಮೊದಲ ಭಾಷೆಯೆಂದು ನೀವು ಹೇಳಬೇಕು. ಆಕಾಶ ಶಬ್ಧದ ಮೂಲಕ ಬಂದಿರುವ ಆಕಾಶ ಭಾಷೆ ಮೊದಲ ಭಾಷೆಯೆಂದು ತಿಳಿದರೂ, ಅದನ್ನು ಮೊದಲ ಭಾಷೆ ಎಂದು ಹೇಳದೇ, ಭೂಮಿ ಮೇಲೆ ಮನುಷ್ಯರ ಮಧ್ಯದಲ್ಲಿ ಹುಟ್ಟಿರುವ ತೆಲುಗು ಭಾಷೆಯನ್ನೇ ಮೊದಲ ಭಾಷೆಯೆಂದು ಹೇಳುವುದರಲ್ಲಿ ನಿಮ್ಮ ಆಂತರ್ಯವೇನು?**

**ಉತ್ತರ :–** ಇದಕ್ಕು ಮೊದಲೇ ದೇವರು ಮೂರು ವಿಧಗಳ ಗ್ರಾಹಿತಗಳನ್ನು ಏರ್ಪಡಿಸಿದ್ದಾನೆಂದು, ಅದರಲ್ಲಿ ಪಾಲಿಸಲ್ಪಡುವವರೆಲ್ಲರಿಗೂ ಒಂದು ವಿಧಾನ, ಪಾಲಿಸುವವರೆಲ್ಲರಿಗೂ ಮತ್ತೊಂದು ವಿಧಾನವನ್ನು ಏರ್ಪಡಿಸಿ, ಸೃಷ್ಠಿಕರ್ತನಾದ ದೇವರು, ದೇವರ ಪ್ರತಿನಿಧಿಯಾದ ಆತ್ಮ ಇಬ್ಬರು ಪ್ರತ್ಯೇಕವಾದ ವಿಧಾನವನ್ನು

ಹೊಂದಿದ್ದಾರೆಂದು ಹೇಳಿದ್ದೇವೆ. ಮೂರು ಭಾಗಗಳಾಗಿ ಇರುವ ಇವರಲ್ಲಿ ಮನುಷ್ಯರು ಮೊದಲ ಭಾಗದೊಳಗೆ, ಆಕಾಶ ಎರಡನೆಯ ಭಾಗದೊಳಗೆ ಬರುತ್ತಿವೆ. ಮನುಷ್ಯರು ಪಾಲಿಸಲ್ಪಡುವವರು, ಆಕಾಶ ಪಾಲಿಸುವುದು. ಆದ್ದರಿಂದ ಇವರಿಗಿರುವ ಭಾಷೆಯನ್ನು ಗ್ರಹಿಸುವ ವಿಧಾನಗಳು ಬೇರೆಬೇರೆಯಾಗಿವೆ. ಇದನ್ನನುಸರಿಸಿ ಗ್ರಹಗಳ ಭೂತಗಳ ಭಾಷೆಗಳು ಬೇರೆ, ಮನುಷ್ಯರ ಪ್ರಾಣಿಗಳ ಭಾಷೆಗಳು ಬೇರೆ. ಪಾಲಕರಾದ ಗ್ರಹಗಳ ಭೂತಗಳಲ್ಲಿ ಆಕಾಶ ಭಾಷೆ ಮೊದಲನೆಯದಾಗಿರಬಹುದು ಆದರೇ, ಪಾಲಿಸಲ್ಪಡುವ ಮನುಷ್ಯರಲ್ಲಿ ಮೊದಲ ಭಾಷೆ ತೆಲುಗು ಮಾತ್ರವೇ. ಆದ್ದರಿಂದ ಭೂಮಿಮೇಲೆ ಪ್ರಥಮಭಾಷೆ ತೆಲುಗು ಭಾಷೆಯೆಂದು ಹೇಳಿದ್ದೇವೆ. ನಮ್ಮ **ತೆಲುಗು ಭಾಷೆ** ಮನುಷ್ಯರ ಪಾಲಿಗೆ **ಜ್ಞಾನ ಕಾಂತಿಯ** ಭಾಷೆ ಆಗಿದೆ. ಆಕಾಶ ಭಾಷೆಯನ್ನು ಮನುಷ್ಯರ ಭಾಷೆಗಳಲ್ಲಿ ಸೇರಿಸಲಿಲ್ಲ. ಆದ್ದರಿಂದ ಆಕಾಶ ಭಾಷೆಯಾದ ಗುಡುಗಿನ ಶಬ್ಧವು ಪ್ರಥಮ ಭಾಷೆಯಾದರೂ ಅದನ್ನು ಕುರಿತು ಹೇಳದೆ ಮನುಷ್ಯರ ಭಾಷೆಯನ್ನು ಪ್ರಥಮ ಭಾಷೆಯೆಂದು ಹೇಳಿದ್ದೇವೆ.

**10) ಪ್ರಶ್ನೆ :– ದೇವರಿಗೆ ಭಾಷೆ ಇಲ್ಲವಾ? ಭಾಷೆ ಬರುವುದಿಲ್ಲವಾ?**

**ಉತ್ತರ :–** ದೇವರಿಗೆ ಭಾಷೆಯೊಂದಿಗೆ ಸಂಬಂಧವಿಲ್ಲ. ಭಾಷೆ ದೇವರಿಂದ ಸೃಷ್ಠಿಸಲ್ಪಟ್ಟಿರುವವರಿಗೆ ಮಾತ್ರವೇ ಲೆಕ್ಕಿಸಲ್ಪಡುತ್ತದೆ. ದೇವರಿಂದ ಜನ್ಮಿಸಲ್ಪಟ್ಟಿರುವವರು ಮಾತ್ರವೇ ಭಾಷೆಯನ್ನು ಉಪಯೋಗಿಸಿಕೊಳ್ಳುತ್ತಿದ್ದಾರೆ. ಅವರಿಗೆ ಮಾತ್ರವೇ ಭಾಷೆ ಉಪಯೋಗಪಡುತ್ತಿದೆ. ದೇವರಿಗಾಗಲೀ, ದೇವರ ಪ್ರತಿನಿಧಿಯಾದ ಆತ್ಮಕ್ಕಾಗಲೀ ಭಾಷೆಯಿಂದ ಸಂಬಂಧವಿಲ್ಲ. ಭಾಷೆಗಿಂತಲೂ ಮೊದಲಿರುವ ಭಾವನೆಯಿಂದಲೇ ಆತ್ಮಗೆ, ದೇವರಿಗೆ ಸಂಬಂಧ. ದೇವರನ್ನು ಎಂದೂ ಭಾಷೆಯೊಂದಿಗೆ ಸಂಬಂಧ ಇಡಬಾರದು.

**11) ಪ್ರಶ್ನೆ :– ಕೆಲವರು ಕೆಲವು ಸಂದರ್ಭಗಳಲ್ಲಿ ಸಂಸ್ಕೃತವನ್ನು ದೈವ ಭಾಷೆಯೆಂದು ಹೇಳುತ್ತಿದ್ದರೇ ಕೇಳಿದ್ದೇವೆ. ಅವರ ಮಾತು ಅಸತ್ಯವೆನ್ನುತ್ತಿರಾ?**

**ಉತ್ತರ :–** ಇಲ್ಲದ ಭಾಷೆಯನ್ನು ಇದೆಯೆಂದು ಹೇಳಿದರೇ ಅವರ ಮಾತನ್ನು ಅಸತ್ಯವೆಂದು ಹೇಳದೇ ಏನೆನ್ನಬೇಕು? ದೇವರಿಗೆ ಭಾವನೆಗೆ ಸಂಬಂಧವಿದೆ ಆದರೆ, ದೇವರಿಗೆ ಯಾವ ಭಾಷೆಯೊಂದಿಗೂ ಸಂಬಂಧವಿಲ್ಲ, ದೇವರು ಭಾಷೆಗೆ ಅತೀತನು ಆದಕಾರಣ ನಾನು ಯಾರೊಂದಿಗೂ ಮಾತನಾಡುವುದಿಲ್ಲವೆಂದು ಹೇಳಿದ್ದಾನೆ. ದೇವರು ಯಾವ ಭಾಷೆಯಲ್ಲೂ ಯಾರೊಂದಿಗೂ ಮಾತನಾಡಲಿಲ್ಲ.

**12) ಪ್ರಶ್ನೆ :– ಕೆಲವು ದೇವಾಲಯಗಳಲ್ಲಿ ದೇವರಿಗೆ ಸಂಸ್ಕೃತ ಭಾಷೆ ಹೊರತು ಏನೂ ತಿಳಿದಿಲ್ಲವೆನ್ನುವಂತೆ ಸಂಸ್ಕೃತ ಭಾಷೆಯಲ್ಲಿಯೇ ಮಂತ್ರಗಳು ಹೇಳುವುದು, ಸಂಸ್ಕೃತದಲ್ಲಿಯೇ ಸಮರ್ಪಣೆ ಮಾಡುವುದು ಮಾಡುತ್ತಿರುತ್ತಾರೆ. ಸಂಸ್ಕೃತ ಹೊರತುಪಡಿಸಿ ಗುಡಿಯಲ್ಲಿನ ದೇವರಿಗೆ ಬೇರೆ ಭಾಷೆ ಬರುವುದಿಲ್ಲವಾ?**

**ಉತ್ತರ :–** ಇದಕ್ಕು ಮೊದಲು ದೇವರ ವಿಷಯವನ್ನು ಕೇಳಿದ್ದೀಯ. ಅದಕ್ಕೆ ಉತ್ತರ ಹೇಳಿದ್ದೇವೆ. ಈಗ ನೀನು ದೇವಾಲಯಗಳಲ್ಲಿನ ಅಂದರೇ ಗುಡಿಯಲ್ಲಿನ ದೇವರುಗಳ ವಿಷಯವನ್ನು ಕೇಳುತ್ತಿದ್ದೀಯ. ಆದ್ದರಿಂದ ಇಲ್ಲಿ ನಾನು ಸ್ವಲ್ಪ ವಿವರವಾಗಿ ಹೇಳಬೇಕಾಗಿರುವ ಅವಶ್ಯವಿದೆ. ಹಾಗೆಯೇ ನೀನು ಕೂಡಾ ಸ್ವಲ್ಪ ವಿಚಕ್ಷಣೆಯಿಂದ ತಿಳಿಯಬೇಕಾಗಿದೆ. ಸೃಷ್ಠಿಕರ್ತನಾದ ದೇವರು ತನ್ನ ಸೃಷ್ಠಿಯನ್ನು ಎರಡು ವಿಧಗಳಾಗಿ ಸೃಷ್ಠಿಸಿದ್ದಾನೆಂದು, ಒಬ್ಬರು ಪಾಲಿಸುವವರು, ಮತ್ತೊಬ್ಬರು ಪಾಲಿಸಲ್ಪಡುವವರೆಂದು ಹೇಳಿದ್ದೇವೆ. ಪಾಲಿಸುವವರಲ್ಲಿ ಮಹಾಭೂತಗಳು, ಭೂತಗಳು, ಗ್ರಹಗಳು, ಉಪಗ್ರಹಗಳು ಇವೆ. ಮಹಾಭೂತಗಳು ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ ಎನ್ನುವ ಐದು ಮಾತ್ರವೇ ಇವೆ. ನಂತರ ಭೂತಗಳು ಲೆಕ್ಕವಿಲ್ಲದಷ್ಟು ಇವೆ. ಗ್ರಹಗಳು ಹನ್ನೆರಡು ಮಾತ್ರವೇ ಇರುವಾಗ, ಉಪಗ್ರಹಗಳು ಅನೇಕ ಇವೆ. ಎಲ್ಲವನ್ನು ಕೂಡಿಸಿ ಹೇಳಿದರೇ ಕೆಲವು ಕೋಟಿಗಳ ಸಂಖ್ಯೆಯಲ್ಲಿವೆ. ಎಷ್ಟು ಕೋಟಿಗಳೆಂದು ಸಂಖ್ಯೆಯನ್ನು ಹೇಳಲಾರೆವು ಆದರೇ ಕನಿಷ್ಟ ನೂರುಕೋಟಿಗಳಿಗು ಕಡಿಮೆ ಇಲ್ಲವೆಂದು ಹೇಳಬಹುದು. ಮತ್ತೊಂದು ಲೆಕ್ಕದ ಪ್ರಕಾರ 108 ಕೋಟಿಗಳಿವೆಯೆಂದು ಅದರಲ್ಲಿ 54 ಕೋಟಿಗಳು ಭೂತಗಳಾಗಿರುವಾಗ, 54 ಕೋಟಿಗಳು ಗ್ರಹಗಳೆಂದು ಹೇಳಬಹುದು. ಇದೆಲ್ಲವೂ ದೇವರ ಸೃಷ್ಠಿಯಲ್ಲಿನ ಒಂದು ವಿಭಾಗವೊಂದರ ವಿವರ ಮಾತ್ರವೇ.

ಎರಡನೆಯ ವಿಭಾಗವಾದ ಪಾಲಿಸಲ್ಪಡುವವರು ಅಂಡಜ, ಪಿಂಡಜ, ಉದ್ಭಿಜಗಳೆಂದು ಹೇಳಿದ್ದೇವೆ. ಇವರಲ್ಲಿ ಮನುಷ್ಯರು ಪ್ರಾಣಿಗಳು ಪಿಂಡಜಗಳೆಂದು, ಪಕ್ಷಿಗಳು ಕೀಟಕಗಳು ಅಂಡಜಗಳೆಂದು, ವೃಕ್ಷಗಳು ಬಳ್ಳಿಗಳು ಉದ್ಭಿಜಗಳೆಂದು ಮಾತ್ರ ಗೊತ್ತು. ಆದರೇ ಇವು ಕಾಣಿಸುವವು ಮಾತ್ರವೇ. ಮನುಷ್ಯರನ್ನು ಹೋಲಿರುವ ದೇವತೆಗಳ ಜಾತಿಯೆಂದು ಹೇಳಲ್ಪಡುವ ಕಾಣಿಸದ ಸೂಕ್ಷ್ಮವಾಗಿ ಇರುವವರನ್ನು ದೇವರು ಪಾಲಿಸಲ್ಪಡುವವರಲ್ಲಿಯೇ ಸೃಷ್ಠಿಸಿದ್ದಾನೆ. ಈದಿನ ಹಿಂದೂಗಳಾಗಿ ಇರುವವರೆಲ್ಲರೂ ದೇವಾಲಯಗಳಲ್ಲಿ ಪೂಜಿಸುವ ಪ್ರತಿಮೆಗಳಲ್ಲಿ ದೇವತೆಗಳು ಸೇರಿ ಮನುಷ್ಯರಿಂದ ಪೂಜಿಸಲ್ಪಡುತ್ತಿದ್ದಾರೆ. ದೇವರು, ಭಕ್ತಿ ಎನ್ನುವವರೆಲ್ಲರೂ ಸೃಷ್ಠಿಕರ್ತನಾದ ದೇವರನ್ನು ತಿಳಿಯದೆ, ದೇವರಿಂದ ಸೃಷ್ಠಿಸಲ್ಪಟ್ಟಿರುವ ದೇವತೆಗಳನ್ನು ಆರಾಧಿಸುತ್ತಿದ್ದಾರೆ. ಈ ದೇವತೆಗಳನ್ನು ಅಂತಿಮ ದೈವಗ್ರಂಥ ಖುರಾನ್‌ನಲ್ಲಿ 'ಜಿನ್ನರು' ಎಂಬ ಹೆಸರಿನಿಂದ ಹೇಳಿದ್ದಾರೆ. ಜಿನ್ನರು ಅಥವಾ ಜಿನ್ನಾತರು ಎಂದು ಹೇಳಲ್ಪಡುವ ದೇವತಾ ಜಾತಿಯನ್ನು ದೇವರು ಸೃಷ್ಠಿಸಿದ್ದಾನೆ. ಖುರಾನ್ ಗ್ರಂಥದಲ್ಲಿ ಸೂರಾ 51, ಆಯತ್ 56ರಲ್ಲಿ ಈ ವಿಷಯವನ್ನು ಹೇಳಿದ್ದಾರೆ ನೋಡಿರಿ.

**(51-56) "ನಾನು ಜಿನ್ನಾತರನ್ನು, ಮಾನವರನ್ನು ಸೃಷ್ಠಿಸಿರುವುದು ಕೇವಲ ಅವರು ನನ್ನನ್ನು ಆರಾಧಿಸುವುದಕ್ಕಾಗಿಯೇ."**

ಸೂಕ್ಷ್ಮವಾಗಿರುವ ಜಿನ್ನಾತರು (ದೇವತೆಗಳು) ಸ್ಥೂಲವಾಗಿರುವ ಮನುಷ್ಯರು ತಮ್ಮನ್ನು ಸೃಷ್ಠಿಸಿರುವ ದೇವರನ್ನು ಆರಾಧಿಸಬೇಕಾಗಿರುವಾಗ, ಮನುಷ್ಯರು ಗುಡಿಗಳಲ್ಲಿನ ಪ್ರತಿಮೆಗಳಲ್ಲಿ ಸೇರಿರುವ ಜಿನ್ನಾತರನ್ನು (ದೇವತೆಗಳನ್ನು) ಆರಾಧಿಸುತ್ತಿದ್ದಾರೆ. ಮನುಷ್ಯರು ದೇವತೆಗಳನ್ನು ಆರಾಧಿಸುವುದು ಮೊದಲ ಯುಗದಿಂದ ರೂಢಿಸಿಕೊಂಡಿದ್ದಾರೆ.

ತಮ್ಮನ್ನು ಸೃಷ್ಠಿಸಿರುವ ಸೃಷ್ಠಿಕರ್ತನನ್ನು ಮರೆತುಹೋದ ಮನುಷ್ಯರು, ದೇವತೆಗಳು ಇಬ್ಬರು ಪಾಲಿಸಲ್ಪಡುವ ವಿಭಾಗದಲ್ಲಿನವರೇ. ಒಂದು ವಿಧವಾಗಿ ಅರ್ಥ ಮಾಡಿಕೊಂಡರೇ ದೇವತೆಗಳು ಕೂಡಾ ಮಾನವ ಜಾತಿಗೆ ಸಂಬಂಧಿ

ಸಿರುವವರೇ. ಕಾಣಿಸದಿರುವವರನ್ನು ದೇವತೆಗಳು ಎನ್ನುತ್ತೇವೆ. ಕಾಣಿಸುವವರನ್ನು ಮನುಷ್ಯರೆನ್ನುತ್ತೇವೆ. ದೇವತೆಗಳಿಗೆ ಸಾವು, ಹುಟ್ಟು, ಜೀವನ ಎಲ್ಲಾ ಸೂಕ್ಷ್ಮವಾಗಿ ಇರುತ್ತದೆ. ಮನುಷ್ಯರಿಗಾದರೇ ಸ್ಥೂಲವಾಗಿರುತ್ತದೆ. ಅಷ್ಟೆ ಹೊರತು ದೇವತೆಗಳಿಗು ಮನುಷ್ಯರಿಗು ಏನೂ ವ್ಯತ್ಯಾಸವಿಲ್ಲ. ಎಲ್ಲಾ ವಿಷಯಗಳು ಮನುಷ್ಯರಿಗಿರುವ ಹಾಗೆಯೇ ಇರುತ್ತವೆ. ಪಾಪಪುಣ್ಯ ಕರ್ಮಗಳನ್ನು ಅನುಭವಿಸುವುದು, ಸಂಪಾದಿಸುವುದು ಎರಡು ಮನುಷ್ಯರಿಗಿರುವಹಾಗೆಯೇ ದೇವತೆಗಳಿಗೆ ಕೂಡಾ ಇರುತ್ತದೆ. ಹಾಗೆಯೇ ಮಾತನಾಡುವ ಭಾಷೆ ಕೂಡಾ ದೇವತೆಗಳಿರುತ್ತದೆ. ಎಲ್ಲರನ್ನೂ ಹುಟ್ಟಿಸಿರುವ ದೇವರಿಗೆ ಭಾಷೆಯಿಲ್ಲ ಆದರೇ, ಸೃಷ್ಠಿಸಲ್ಪಟ್ಟಿರುವ ದೇವತೆಗಳಿಗೆ ಭಾಷೆ ಇದೆ. ದೇವತೆಗಳಿಗೆ ಯಾವ ಪ್ರದೇಶದವರಿಗೆ ಆ ಪ್ರದೇಶದ ಭಾಷೆ ಮಾತ್ರವೇ ತಿಳಿಯುವುದು.

ಒಂದು ಪ್ರದೇಶದಲ್ಲಿ ತೆಲುಗು ಮಾತನಾಡುವ ಪ್ರಜೆಗಳಿದ್ದರೇ ಆ ಪ್ರದೆಶದಲ್ಲಿನ ಗುಡಿಯಲ್ಲಿರುವ ದೇವತೆಗೆ ಮನುಷ್ಯರು ಮಾತನಾಡುವ ತೆಲುಗು ಬರುತ್ತದೆ. ತೆಲುಗು ಮನುಷ್ಯರು ಗುಡಿಗೆ ಬಂದು ಹೋಗುವುದರಿಂದ ದೇವತೆಗಳಿಗೆ ತೆಲುಗು ಭಾಷೆಯೇ ಬರುತ್ತದೆ. ತಮಿಳುನಾಡಿನ ರಾಷ್ಟ್ರದಲ್ಲಿ ಒಂದು ಗುಡಿಯಲ್ಲಿನ ದೇವತೆ ಇತರರ ಮೈಯೊಳಗೆ ಬಂದು ಮಾತನಾಡುವಾಗ ತಮಿಳನ್ನೇ ಮಾತನಾಡುವುದನ್ನು ನೋಡಿದ್ದೇನೆ. ಹಾಗೆಯೇ ಆಂಧ್ರ ರಾಷ್ಟ್ರದಲ್ಲಿ ಕೆಲವು ಗುಡಿಗಳಲ್ಲಿನ ದೇವತೆಗಳು ಮಾತನಾಡುವಾಗ ತೆಲುಗಿನಲ್ಲಿಯೇ ಮಾತನಾಡುವುದು ನೋಡಿದ್ದೇನೆ. ನಾವು ತಮಿಳುನಾಡಿಗೆ ಹೋಗಿ ಅಲ್ಲಿನ ದೇವತೆಯೊಂದಿಗೆ ಮಾತನಾಡಬೇಕೆಂದು ಪ್ರಯತ್ನಿಸಿದರೂ, ಆ ದೇವತೆಗೆ ತೆಲುಗು ಗೊತ್ತಿಲ್ಲ, ಆದಕಾರಣ ತೆಲುಗಿನಲ್ಲಿ ಮಾತನಾಡಲಿಲ್ಲ. ಆಕೆ ತಮಿಳಿನಲ್ಲಿ ಮಾತನಾಡಿದರೂ ಅದು ನಮಗೆ ಅರ್ಥವಾಗುವುದಿಲ್ಲ. ಅದೇ ವಿಧವಾಗಿ ತೆಲುಗು ರಾಷ್ಟ್ರದಲ್ಲಿ ನಾನು ಬಹಳಜನ ದೇವತೆಗಳೊಂದಿಗೆ ಅಲ್ಲಲ್ಲಿ ಮಾತನಾಡುವುದು ನಡೆದಿದೆ. ಆಗ ಅವರು ತೆಲುಗು ಮಾತನಾಡಿದರೂ ಆ ಪ್ರದೇಶದಲ್ಲಿ ಮಾತನಾಡುವ ಪ್ರಾಸದಲ್ಲಿಯೇ ಮಾತನಾಡುವುದು ನೋಡಿದ್ದೇನೆ. ತೆಲಂಗಾಣದಲ್ಲಿ ಅಲ್ಲಿನ

ತೆಲಂಗಾಣ ಪ್ರಾಸದಲ್ಲಿ ಅಲ್ಲಿನ ದೇವತೆಗಳು ಮಾತನಾಡುವುದು, ರಾಯಲಸೀಮ ಪ್ರದೇಶದಲ್ಲಿನ ದೇವತೆಗಳು ರಾಯಲಸೀಮ ಪ್ರದೇಶ ಪ್ರಾಸದಲ್ಲಿ ತೆಲುಗು ಮಾತನಾಡುವುದು ನೋಡಿದ್ದೇನೆ. ಇದನ್ನನುಸರಿಸಿ ಯಾವ ಪ್ರದೇಶದವರಿಗೆ ಆ ಪ್ರದೇಶದ ಭಾಷೆಯೇ ಹವ್ಯಾಸವಾಗಿದೆಯೆಂದು ತಿಳಿಯುತ್ತಿದೆ.

ಕೆಲವು ದೇವಾಲಯಗಳಲ್ಲಿನ ಮುಖ್ಯವಾದ ದೇವತೆಗಳು ಕೂಡಾ ನನ್ನೊಂದಿಗೆ ಮಾತನಾಡುವುದು ನಡೆದಿದೆ. ಆಗ ಅವರನ್ನು ನಾನು ಕೆಲವು ಪ್ರಶ್ನೆಗಳು ಕೇಳುವುದು ನಡೆದಿದೆ. ನಿತ್ಯ ಪೂಜೆಗಳು ಮಾಡುವ ಪೂಜಾರಿಗಳು ಸಂಸ್ಕೃತದಲ್ಲಿ ಮಂತ್ರಗಳು ಓದುತ್ತಿರುತ್ತಾರೆ ಅಲ್ಲವೇ! ಆಗ ಆ ಮಂತ್ರಗಳು ನಿಮಗೆ ಅರ್ಥವಾಗುತ್ತಿದ್ದವಾ ಎಂದು ಕೇಳಿದಾಗ! **“ನಮಗೆ ತೆಲುಗು ಭಾಷೆ ಮಾತ್ರ ಅರ್ಥವಾಗುತ್ತದೆ. ಚಿಕ್ಕಂದಿನಿಂದ ತೆಲುಗು ಭಾಷೆ ಅಭ್ಯಾಸವಾಗಿ ಹೋಗಿದೆ. ಸಂಸ್ಕೃತವನ್ನು ಆಗಾಗ ಪೂಜೆಗಳಲ್ಲಿ ಮಾತ್ರ ಕೇಳುತ್ತಿದ್ದೇವೆ. ಆ ಭಾಷೆ ನಮಗೆ ತಿಳಿಯದಿರುವುದರಿಂದ ಅವರು ಏನು ಹೇಳುತ್ತಿದ್ದಾರೋ ಏನೂ ಗೊತ್ತಿಲ್ಲ. ನೋಡುತ್ತಾ, ನೋಡುತ್ತಾ ಹೇಳುವ ಸಂಸ್ಕೃತದಲ್ಲಿನ ಕೆಲವು ಮಾತುಗಳಿಗೆ ಅರ್ಥ ತಿಳಿಯುವುದು. ಅಷ್ಟೆಹೊರತು ಉಳಿದಿದ್ದೇನೋ ಅರ್ಥ ಗೊತ್ತಿಲ್ಲ. ‘ಸ್ವಾಹ’ ಎಂದರೇ ಮುಗಿದುಹೋಯಿತೆಂದು, ‘ಸಮರ್ಪಣೆ’ ಎಂದರೇ ಕೊಡುತ್ತಿದ್ದೇವೆ ಎಂದು ಇಂತಹ ಕೆಲವು ಮುಖ್ಯವಾದ ಪದಗಳಿಗೆ ಅರ್ಥ ತಿಳಿಯುವುದು. ಉಳಿದವು ಏನೋ ಗೊತ್ತಿಲ್ಲ. ಅವರ ಪದ್ಧತಿ ಪ್ರಕಾರ ಅವರು ಪೂಜೆಗಳು ಮಾಡುತ್ತಿದ್ದಾರೆಂದು ಅಂದುಕೊಳ್ಳೋಣ. ಉಳಿದ ಮಾತುಗಳಲ್ಲಿ ಏನು ಹೇಳುವುದು ನಮಗೆ ಏನೂ ಗೊತ್ತಿಲ್ಲ”** ಎಂದಿದ್ದಾರೆ.

**13) ಪ್ರಶ್ನೆ :– ದೊಡ್ಡ ದೇವಾಲಯಗಳು, ಚಿಕ್ಕ ದೇವಾಲಯಗಳು ಎಂದು ಎರಡು ವಿಧಗಳಿರುತ್ತದೆ. ದೊಡ್ಡ ದೇವಾಲಯಗಳಲ್ಲಿ ಮಹಾ ದೇವತೆಗಳಿರುತ್ತಾರೆ ಎಂದು, ಚಿಕ್ಕ ದೇವಾಲಯಗಳಲ್ಲಿ ಕ್ಷುದ್ರ ದೇವತೆಗಳಿರುತ್ತಾರೆಂದು ಕೆಲವರು ಹೇಳುತ್ತಿದ್ದಾರೆ. ಅದರಲ್ಲಿ ಯಾವ ದೇವಾಲಯದಲ್ಲಿ ನೀವು ಕೇಳಿ ಮಾತನಾಡಿದ್ದೀರೋ?**

**ಉತ್ತರ :–** ದೊಡ್ಡ ದೇವಾಲಯದಲ್ಲಿ ಕೇಳಿದಾಗಲೇ ಈ ವಿಧವಾಗಿ ಹೇಳಿದ್ದಾರೆ.

ನಾನು ಚಿಕ್ಕ ದೊಡ್ಡ ದೇವಾಲಯಗಳಲ್ಲಿನ ದೇವತೆಗಳೊಂದಿಗೆ ಅನೇಕಬಾರಿ ಮಾತನಾಡಿದ್ದೇನೆ. ನೀವು ಅಂದುಕೊಂಡಹಾಗೆ ದೊಡ್ಡ ದೇವಾಲಯಗಳಲ್ಲಿ ಮಹಾ ದೇವತೆಗಳು, ಚಿಕ್ಕ ದೇವಾಲಯಗಳಲ್ಲಿ ಕ್ಷುದ್ರ ದೇವತೆಗಳು ಇದ್ದಾರೆಂದು ಕೊಳ್ಳುವುದು ತಪ್ಪು. ಯಾವ ದೇವಾಲಯಗಳಲ್ಲಿ ಯಾರಾದರೂ ಇರಬಹುದು. ಅವರ ಕರ್ಮವನ್ನು ಅನುಸರಿಸಿ ಅವರಿಗೆ ಚಿಕ್ಕದೊಡ್ಡ ಆಲಯಗಳು ಲಭ್ಯ ವಾಗಿರುತ್ತವೆ. ಗ್ರಾಮ ದೇವತೆಗಳನ್ನು ಕ್ಷುದ್ರ ದೇವತೆಗಳೆಂದು, ಉಳಿದ ದೇವತೆಗಳನ್ನು ಮಹಾ ದೇವತೆಗಳೆಂದು ಎನ್ನುವುದು ಪರಿಪಾಟವಾಗಿದೆ. ಅಷ್ಟೇ ಹೊರತು ಆಲಯಗಳನ್ನು ಅನುಸರಿಸಿ ಅವರನ್ನು ಇಂಥವರೆಂದು ಹೇಳಲಾರೆವು. ಹೈದರಾಬಾದ್‌ನಲ್ಲಿ ಜೂಬ್ಲೀಹಿಲ್ಸ್ ಬಳಿ ದೊಡ್ಡಮ್ಮ ದೇವಾಲಯ ದೊಡ್ಡದಾಗಿಯೇ ಇದೆ. ಆದರೇ ಆಲಯವನ್ನು ಅನುಸರಿಸಿ ಅಲ್ಲಿರುವ ದೊಡ್ಡಮ್ಮನನ್ನು ಮಹಾ ದೇವತೆಯೆಂದು ಹೇಳಲಾರೆವು. ದೊಡ್ಡಮ್ಮ ಗ್ರಾಮ ದೇವತೆ ಆದ್ದರಿಂದ ಆಕೆಯನ್ನು ಕ್ಷುದ್ರದೇವತೆ ಎಂದು ಹೇಳಬಹುದು. ಕೆಲವುಕಡೆ ಚಿಕ್ಕ ದೇವಾಲಯಗಳಲ್ಲಿ ಆಂಜನೇಯ ಸ್ವಾಮಿ ಇದ್ದಾನೆ. ಆಲಯವು ಚಿಕ್ಕದೆಂದು ಅಲ್ಲಿರುವ ಆಂಜನೇಯ ಸ್ವಾಮಿಯನ್ನು ಕ್ಷುದ್ರ ದೇವತೆ ಎಂದು ಹೇಳಲಾರೆವು. ಆಂಜನೇಯನು ಗ್ರಾಮ ದೇವತೆ ಕೆಳಗೆ ಜಮವಿಲ್ಲ, ಆದ್ದರಿಂದ ಮಹಾದೇವತೆ ಕೆಳಗೇ ಹೇಳಬೇಕು. ಚೆನ್ನಾಗಿ ಪೂಜೆಗಳು ನಡೆಯುತ್ತಾ ಆರ್ಥಿಕವಾಗಿ ಚೆನ್ನಾಗಿರುವ ಆಲಯಗಳಲ್ಲಿನ ದೇವತೆಗಳು ತೃಪ್ತಿಯಾಗಿಯೇ ಇದ್ದಾರೆ. ಅವರಿಗೆ ನಿತ್ಯವೂ ನೈವೇದ್ಯದ ಹೆಸರಿನಿಂದ ಆಹಾರ ದೊರೆಯುತ್ತಿದೆ. ಅವರ ಹಸಿವು ತೀರುತ್ತಿದೆ. ಕೆಲವು ಚಿಕ್ಕ ಆಲಯಗಳಲ್ಲಿ ನೈವೇದ್ಯವಿಡದ ಆಲಯಗಳಲ್ಲಿ ಅಲ್ಲಿರುವ ದೇವತೆಗಳು ಹಸಿವಿನಿಂದ ತೊಂದರೆ ಪಡುತ್ತಿದ್ದಾರೆ. ಅವರು ಪ್ರತಿಮೆಯನ್ನು ಬಿಟ್ಟು ಊರಿನೊಳಗೆ ಹೋಗಿ ಕೆಲವು ಮನೆಗಳಲ್ಲಿ ಆಹಾರವನ್ನು ತಿಂದು ಬರುತ್ತಿದ್ದಾರೆ. ಅವರಿಗೆ ನಿತ್ಯ ಆಹಾರವನ್ನು ಹುಡುಕಿಕೊಳ್ಳಬೇಕಾದ ದುರ್ಭರ ಪರಿಸ್ಥಿತಿ ಇದೆ. ಅಂತಹ ದೇವಾಲಯಗಳಲ್ಲಿನ ಒಂದು ಹೆಣ್ಣು ದೇವತೆ ನನ್ನೊಂದಿಗೆ 'ನನಗೆ ಇಲ್ಲಿ ಬಹಳ ಕಷ್ಟವಾಗಿದೆ. ಪೂಜಾರಿ ಬಂದು ಮಂತ್ರಗಳನ್ನು ಓದಿ ದೀಪಂ ಸಮರ್ಪಯಾಮಿ, ದೂಪಂ ಸಮರ್ಪಯಾಮಿ, ನಾರಿಕೇಲಂ ಸಮರ್ಪಯಾಮಿ, ಎಂದು ಬರೀ ಮಂತ್ರಗಳನ್ನು

ಓದಿ ಹೋಗುವುದು ಹೊರತು ಪಡಿಸಿ ಮಂತ್ರಗಳ ಪ್ರಕಾರ ದೂಪವಾಗಲೀ, ದೀಪವಾಗಲೀ ಇರುವುದಿಲ್ಲ. ಹೆಸರಿಗೆ ನಾರಿಕೇಲ ಸಮರ್ಪಯಾಮಿ, ನೈವೇದ್ಯ ಸಮರ್ಪಯಾಮಿ ಎನ್ನುವುದು ಹೊರತು ಅಲ್ಲಿ ನಾರಿಕೇಲ ಇರುವುದಿಲ್ಲ, ನೈವೇದ್ಯ ಇರುವುದಿಲ್ಲ. ಇಂತಹಕಡೆ ಆಹಾರವಿಲ್ಲದೇ ಎಷ್ಟು ದಿನಗಳಿರಬೇಕು. ಆದ್ದರಿಂದ ನಾನು ಹೆಚ್ಚು ದಿನಗಳು ಗುಡಿಯಲ್ಲಿರುವು ದಕ್ಕಿಂತ ಹೊರಗೇ ಕಾಲಕಳೆ ಯುತ್ತಿರುತ್ತೇನೆ. ನೀವಾದರೂ ದಯೆತೋರಿಸಿ ನಮಗೆ ಹಸಿವು ತೀರುವ ಏರ್ಪಾಟು ಮಾಡಿ" ಎಂದು ಕೇಳಿರುವ ಸಂದರ್ಭಗಳು ಇವೆ.

ಹಾಗೆ ನನ್ನ ಬಳಿ ಹೇಳಿರುವ ದೇವತೆಗೆ ನಾನು ಒಂದು ಸಲಹೆ ಕೊಡುತ್ತಾ "ನೀನು ತಮಿಳು ನಾಡಿಗೆ ಹತ್ತಿರದಲ್ಲಿದ್ದೀಯ. ತೆಲುಗಿನವರು ನಿನ್ನನ್ನು ಸರಿಯಾಗಿ ನೋಡದಿರುವಾಗ ತಮಿಳುನಾಡಿಗೆ ಹೋಗು. ಅಲ್ಲಿ ಅವರು ಒಳ್ಳೆಯ ಭಕ್ತಿ ಇರುವವರಾಗಿದ್ದಾರೆ. ಚಿಕ್ಕ ಗುಡಿಯಲ್ಲಿ ಕೂಡಾ ತಪ್ಪದೇ ನೈವೇದ್ಯ ಇಡುವ ಅಭ್ಯಾಸವಿದೆ" ಎಂದು ಹೇಳಿದೆನು. ಆಗ ಆ ದೇವತೆ "ನನಗೆ ಭಾಷೆ ಬರುವುದಿಲ್ಲವಲ್ಲ!" ಎಂದು ಹೇಳಿದಳು. ಅದಕ್ಕೆ ನಾನು ಬದಲು ಹೇಳುತ್ತಾ "ನಿನಗೆ ಭಾಷೆಯೊಂದಿಗೆ ಕೆಲಸವೇ ಇಲ್ಲ. ಯಾರೊಂದಿಗೆಯಾದರೂ ಮಾತನಾಡ ಬೇಕೆಂದುಕೊಂಡಾಗ ಭಾಷೆಯೊಂದಿಗೆ ಅನವಶ್ಯಕ. ಕೆಲವು ದಿನಗಳು ಮಾತನಾಡದಂತೆ ಇರು. ಅಲ್ಲಿನ ಪ್ರಜೆಗಳು ನಿತ್ಯವು ಮಾತನಾಡುವ ಮಾತುಗಳು ಕೇಳುತ್ತಾ ಇದ್ದರೆ ಭಾಷೆ ಬೇಗನೇ ಬರುತ್ತದೆ. ಅಲ್ಲಿ ಯಾವುದಾದರೂ ಗುಡಿ ಖಾಲಿಯಾಗಿ ಇದ್ದರೇ ನೋಡಿಕೊಂಡು ಹೊರಟುಹೋಗು!" ಎಂದು ಹೇಳಿದೆನು. ಈ ವಿಧವಾಗಿ ಕೆಲವುಕಡೆ ಗುಡಿಗಳಲ್ಲಿನ ದೇವತೆಗಳು ಕೂಡಾ ತೊಂದರೆ ಪಡುತ್ತಿದ್ದಾರೆ. ಅವರು ನಮ್ಮಂಥವರೇ. ಅವರು ದೇವತೆಗಳೆಂದು ಅವರನ್ನು ದೊಡ್ಡದಾಗಿ ಭಾವಿಸಿಕೊಂಡರೂ, ಅವರಲ್ಲಿ ಆ ದೊಡ್ಡತನವೇನೂ ಇರುವುದಿಲ್ಲ. ಅವರು ಕೂಡಾ ಹೊಟ್ಟೆಪಾಡಿಗಾಗಿ ಬಹಳ ಕಷ್ಟಗಳು ಪಡುತ್ತಿದ್ದಾರೆ. ದೇವತೆಗಳಲ್ಲಿ ಕೂಡಾ ಧನಿಕರಿದ್ದಾರೆ, ಬಡವರಿದ್ದಾರೆ. ನಿತ್ಯವು ಹಸಿವಿನಿಂದ ಬಾಧೆಪಡುವವರು ಇದ್ದಾರೆಂದು ಮರೆಯಬಾರದು.

**14) ಪ್ರಶ್ನೆ :– ದೇವತೆಗಳು ಮನುಷ್ಯರು ದೇವರು ಹುಟ್ಟಿಸಿರುವವರೇ ಎಂದು, ಪಾಲಿಸಲ್ಪಡುವವರೆಂದು, ಅವರು ತಪ್ಪದೇ ಭಾಷೆಯನ್ನು ಕಲಿಯಬೇಕಾಗಿರುವುದೇ ಎಂದು, ಮನುಷ್ಯರಿಗೆ ಬಂದಹಾಗೆಯೇ ದೇವತೆಗಳಿಗು ಕೂಡಾ ಭಾಷೆಗಳು ಒಂದೆರಡು ಮಾತ್ರವೇ ಬರುವವೆಂದು, ಎರಡು ಭಾಷೆಗಳು ಬಂದ ದೇವತೆಗಳು ಅಪರೂಪವಾಗಿ ಇರುತ್ತಾರೆಂದು, ಮನುಷ್ಯರಹಾಗೆ ದೇವತೆಗಳಲ್ಲಿ ಕೂಡಾ ಬುದ್ಧಿವಂತರು, ದಡ್ಡರು ಇದ್ದಾರೆಂದೂ, ದೇವತೆಗಳ ಜಾತಿ ಕಾಣಿಸದೆ ಸೂಕ್ಷ್ಮವಾಗಿದೆಯೆಂದು ನೀವು ಹೇಳಿದರೇ ನಾವು ಕೇಳಿದ್ದೇವೆ. ಆದರೇ ಈ ದೇವತೆಗಳ ಜಾತಿ ಅಂಡಜಗಳಾ, ಪಿಂಡಜಗಳಾ? ಎಂಬ ಅನುಮಾನ ಬಂದಿದೆ. ಇದಕ್ಕೆ ನೀವೇನು ಹೇಳುತ್ತೀರಿ? ಅಷ್ಟೇಅಲ್ಲದೇ ದೇವತೆಗಳು ಅವರಲ್ಲಿ ಅವರು ಮಾತನಾಡಿಕೊಳ್ಳುತ್ತಿರುತ್ತಾರೆಯೇ? ಮಾತನಾಡಿಕೊಂಡರೇ ಅವರು ಮನುಷ್ಯರಿಗೆ ತಿಳಿಯದ ಯಾವ ಭಾಷೆಯಲ್ಲಾದರೂ ಮಾತನಾಡಬಲ್ಲರಾ? ಅಥವಾ ಮನುಷ್ಯರಿಗೆ ತಿಳಿದಿರುವ ಪ್ರಾಂತೀಯ ಭಾಷೆಯಲ್ಲಿಯೇ ಮಾತನಾಡಿಕೊಳ್ಳುತ್ತಾರಾ? ಮತ್ತೊಂದು ವಿಷಯ ನಮಗೆ ಓದುಬರಹ ಬಂದಹಾಗೆ ಅವರಿಗೆ ಓದುಬರಹ ಬರುತ್ತದಾ? ನಮಗೆ ಉಂಟಾದ ಪ್ರಶ್ನೆಗಳಿಗೆ ವಿವರವಾಗಿ ಉತ್ತರ ಹೇಳಬಲ್ಲಿರೆಂದು ಕೇಳುತ್ತಿದ್ದೇವೆ?**

**ಉತ್ತರ :–** ನೀವು ಈ ಪ್ರಶ್ನೆಗಳಲ್ಲಿ ಕೇಳಿರುವುದು ಒಂದು ದೇವತೆಗಳು ದಡ್ಡರಾ? ಎರಡು ಅವರ ಜನ್ಮ, ಮೂರು ಅವರ ಭಾಷೆ, ನಾಲಕ್ಕು ಅವರಿಗೆ ಓದುಬರಹ ಬರುತ್ತದಾ? ಈ ನಾಲಕ್ಕು ಪ್ರಶ್ನೆಗಳಿಗೆ ವಿವರ ಬೇಕೆಂದರೇ ಭಾಷೆಯನ್ನು ಕುರಿತು ಇದಕ್ಕು ಮೊದಲೇ ಸ್ವಲ್ಪ ವಿವರವಾಗಿ ಹೇಳಿದ್ದೇವೆ. ಆದರೇ ಇದರಲ್ಲಿ ಅವರಿಗೆ ಪ್ರತ್ಯೇಕವಾದ ಭಾಷೆ ಯಾವುದಾದರೂ ಇದೆಯಾ? ಎಂದು ಕೇಳಿದ್ದೀರಿ. ಹಾಗಿದ್ದರೇ ಮೊದಲೇ ಹೇಳುತ್ತಿದ್ದೆವು. ಅವರಿಗೆ ಪ್ರತ್ಯೇಕವಾದ ಭಾಷೆ ಯಾವುದೂ ಇಲ್ಲ. ಅವರು ದೇವತಾ ಜಾತಿಯಾದರೂ ಮನುಷ್ಯರ ಜಾತಿಯೊಂದಿಗೆ ಸಮಾನವಾಗಿಯೇ ಇದ್ದಾರೆ ಹೊರತು ಪ್ರತ್ಯೇಕಿಸಿ ಭಾಷೆಯಿಲ್ಲ, ಪ್ರತ್ಯೇಕವಾದ ಜೀವನ ಇಲ್ಲ. ಅವರು ಮನುಷ್ಯರ ಹಾಗೆ ನಾಗರಿಕರು ಇದ್ದಾರೆ, ಅನಾಗರಿಕರು ಇದ್ದಾರೆ. ಬುದ್ಧಿವಂತರು ಇದ್ದಾರೆ, ದಡ್ಡರೂ ಇದ್ದಾರೆ. ಮನುಷ್ಯರಿಗಿಂತಲೂ

ಹೀನವಾದ ಭಾವನೆಗಳಿರುವವರು ಇದ್ದಾರೆ. ಮನುಷ್ಯರಲ್ಲಿ ಇತರರ ತಪ್ಪನ್ನು ಸಹಿಸಿಕೊಂಡು ಹೋಗುವ ಸ್ವಭಾವವಿದ್ದರೂ, ದೇವತೆಗಳಲ್ಲಿ ಇತರರ ತಪ್ಪನ್ನು ಸ್ವಲ್ಪವೂ ಸಹಿಸಿಕೊಳ್ಳದೇ ಅವರ ಮೇಲೆ ದ್ವೇಷ ಸಾಧಿಸಬೇಕೆಂಬ ಭಾವನೆ ಯಿರುವುದು ಬಹಳ ಹೇಯವಾದ ಕೆಲಸ, ಮನುಷ್ಯರಿಗಿಂತಲೂ ನೀಚವಾಗಿ ಯೋಚಿಸುವ ಕೆಲಸವೆಂದು ಹೇಳಬಹುದು. ತಿಳಿದು ಮಾಡಿರುವು ದಲ್ಲದೆ ತಿಳಿಯದೆ ಮಾಡಿದ ತಪ್ಪನ್ನು ಕೂಡಾ ಹೆಚ್ಚಾಗಿ ಲೆಕ್ಕಿಸಿ ಪ್ರತೀಕಾರ ತೀರಿಸಿಕೊಳ್ಳಬೇ ಕೆಂಬುದು ದೇವತೆಗಳಲ್ಲಿದೆ. ಇನ್ನು ಜನ್ಮ ವಿಷಯಕ್ಕೆ ಬಂದರೇ ಸೂಕ್ಷ್ಮವಾಗಿ ಆದರೂ ಅವರು ಮನುಷ್ಯರ ಹಾಗೆ ಪಿಂಡಜಗಳೇ ಎಂದು ತಿಳಿಯಬೇಕು. ಅವರಿಗೆ ಬಾಲ್ಯ, ಯವ್ವನ, ಕೌಮಾರ್ಯ, ವೃದ್ಧಾಪ್ಯ ಎಂಬ ದಶೆಗಳು ಮಾನವರಿಗಿರುವಹಾಗೆಯೇ ಇವೆ. ಅವರಲ್ಲಿ ಎರಡು ಭಾಷೆಗಳು ಬಂದವರು ಬಹಳ ಅಪರೂಪವಾಗಿ ಇರುತ್ತಾರೆ. ಹಾಗೆಯೇ ಮನುಷ್ಯರಿಗೆ ಬಂದಹಾಗೆ ಅವರಿಗೆ ಓದುಬರಹ ಬರುವುದಿಲ್ಲ. ಮನುಷ್ಯರಿಗಿರುವಹಾಗೆ ಅವರಿಗೆ ಪಾಠಶಾಲೆಗಳಿಲ್ಲ. ಆದ್ದರಿಂದ ದೇವತೆಗಳಿಗೆ ಓದುಬರಹ ಬರುವುದಿಲ್ಲವೆಂದೇ ಹೇಳಬೇಕು. ಎಲ್ಲಾದರೂ ಒಬ್ಬರು ಆಸಕ್ತಿಯಿಂದ ಓದಬಲ್ಲ ಸಾಮರ್ಥ್ಯ ಇರುವವರು ಇದ್ದಾರೆ.

**15) ಪ್ರಶ್ನೆ :– ಭಗವದ್ಗೀತೆಯನ್ನು ಸಂಸ್ಕೃತ ಶ್ಲೋಕಗಳಲ್ಲಿ ವ್ಯಾಸನು ಬರೆದಿದ್ದಾನೆಂದರೇ, ಸಂಸ್ಕೃತ ಭಾಷೆ ವ್ಯಾಸನಿಗೆ ಇಷ್ಟವಾದುದಾ? ದೇವರಿಗೆ ಇಷ್ಟವಾದುದಾ?**

**ಉತ್ತರ :–** ಸಂಸ್ಕೃತ ಭಾಷೆ ದೇವರಿಗೆ ಇಷ್ಟವಾದುದು ಎನ್ನುವುದರಲ್ಲಿ ಅರ್ಥವೇ ಇಲ್ಲ. ದೇವರು ಮನುಷ್ಯರ ಸ್ಥಾನಕ್ಕೆ ಇಳಿದರೇನೇ ಭಾಷೆಗಳನ್ನು ನೋಡಬಲ್ಲನು. ದೇವರು ದೇವರ ಸ್ಥಾನದಲ್ಲಿದ್ದರೇ ಆತನಿಗೆ ಯಾವ ಭಾಷೆಯೊಂದಿಗೂ ಸಂಬಂಧವಿಲ್ಲ. ಆತನಿಗೆ ಭಾವನೆಯೊಂದಿಗೆಯೇ ಸಂಬಂಧವೆಂದು ಪ್ರತಿಯೊಬ್ಬರು ತಿಳಿಯಬೇಕು. ದೇವರು ಮನುಷ್ಯರು ಬರೆದುಕೊಳ್ಳುವ ಭಾಷೆಯನ್ನು ಸ್ವಲ್ಪವಾದರೂ ಗಣನೆಗೆ ತೆಗೆದುಕೊಳ್ಳುವುದಿಲ್ಲ. ಮನುಷ್ಯರು ಇಷ್ಟವನ್ನು ಅನುಸರಿಸಿ ಅವರು

ಬರೆದುಕೊಳ್ಳುವುದು, ಅವರಿಗೆ ಬಂದ ಭಾಷೆಯನ್ನು ಅನುಸರಿಸಿ ಬರೆಯುವುದು, ಓದುವುದು ನಡೆಯುತ್ತಿರುತ್ತದೆ. ವ್ಯಾಸನಿಗೆ ಹಿಂದೀ ಭಾಷೆ, ಸಂಸ್ಕೃತ ಭಾಷೆ ಎರಡು ಭಾಷೆಗಳು ಬರುತ್ತಿದ್ದವು. ಹಿಂದೀ ಸರ್ವಸಾಧಾರಣವಾಗಿ ಮಾತನಾಡುವ ಭಾಷೆಯಾಗಿ ಇರುತ್ತಿತ್ತು. ಆದಿನ ಆಧ್ಯಾತ್ಮಿಕ ವಿಷಯಗಳೇನಾದರೂ ಸಂಸ್ಕೃತದಲ್ಲಿಯೇ ಬರೆಯಬೇಕೆಂದೂ, ಸಂಸ್ಕೃತದಲ್ಲಿಯೇ ಮಾತನಾಡಬೇಕೆಂದು ಒಂದು ನಿಯಮವನ್ನು ಆದಿನದ ಹಿರಿಯರೆನ್ನಲ್ಪಡುವ ಕೆಲವರು ಸ್ವಾರ್ಥ ವಿರುವವರು ಇಟ್ಟಿದ್ದಾರೆ. ಸಂಸ್ಕೃತ ಇಷ್ಟವಿದ್ದರೂ ಇಷ್ಟವಿಲ್ಲದೇ ಹೋದರೂ ಅದರಲ್ಲಿಯೇ ಧಾರ್ಮಿಕ ವಿಷಯಗಳೆಲ್ಲವನ್ನೂ ಬರೆಯುವುದು, ಮಾತನಾಡು ವುದು ನಡೆಯುತ್ತಿತ್ತು. ಸಂಸ್ಕೃತವು ಲಿಪಿಇಲ್ಲದ ಭಾಷೆಯಾದ್ದರಿಂದ ಕಲಿಯುವುದು ಕಷ್ಟವಾದ ಕೆಲಸವಾಗಿರುತ್ತಿತ್ತು. ಸಂಸ್ಕೃತವನ್ನು ಕಲಿಯುವುದಕ್ಕೆ ಸಂಸ್ಕೃತವನ್ನು ಮಾತನಾಡುವವರ ಮಧ್ಯದೊಳಗೆ ಹೋಗಿ ಕೆಲವು ದಿನಗಳಿದ್ದು ಕಲಿಯಬೇಕಾಗಿ ಬರುತ್ತಿತ್ತು. ಭಾಷೆಯನ್ನು ಕಲಿತಷ್ಟು ಮಾತ್ರಕ್ಕೆ ಲಿಪಿ ಇಲ್ಲದೇ ಹೋದ್ದರಿಂದ ಹಿಂದೀ ಭಾಷೆಯ ಲಿಪಿಯನ್ನು ಉಪಯೋಗಿಸಿ ಸಂಸ್ಕೃತ ಭಾಷೆಯನ್ನು ಬರೆಯುತ್ತಿದ್ದರು. ಹಿಂದೀ ಭಾಷೆ ಲಿಪಿಯೊಂದಿಗೆ ಆದಿನ ವ್ಯಾಸನು ಸಂಸ್ಕೃತದಲ್ಲಿ ಭಗವದ್ಗೀತೆಯನ್ನು ಬರೆಯುವುದಾಗಿದೆ.

ವ್ಯಾಸನು ಆ ಕಾಲದಲ್ಲಿ ಹೆಚ್ಚು ಗ್ರಂಥಗಳು ಬರೆದಿರುವವನು. ಆದರೂ ವ್ಯಾಸನಿಗೆ ಸಂಸ್ಕೃತ ಭಾಷೆ ಎಂದರೇ ಇಷ್ಟವಿಲ್ಲ. ಇಷ್ಟವಿಲ್ಲದಿದ್ದರೂ, ಆ ಭಾಷೆಯಲ್ಲಿಯೇ ಬರೆಯಬೇಕೆಂದು ನಿಯಮವಿರುವುದರಿಂದ ತಪ್ಪದೇ ಸಂಸ್ಕೃತ ಭಾಷೆಯಲ್ಲಿಯೇ ಭಗವದ್ಗೀತೆಗಿಂತಲೂ ಮೊದಲು ಬರೆದಿರುವ ವೇದಗಳನ್ನು, ಪುರಾಣಗಳನ್ನು, ಉಪನಿಷತ್ತುಗಳನ್ನು ಬರೆದಿದ್ದಾನೆ. ಸಂಸ್ಕೃತ ಭಾಷೆ ಹಿಂದೀ ಭಾಷೆಗಿಂತಲೂ ಕಷ್ಟವಾದ ಭಾಷೆಯಾಗಿದೆ. ಲಂಬಾಣಿ, ಕೊರಚರ ಭಾಷೆಗಳಹಾಗೆ ಸಂಸ್ಕೃತ ಭಾಷೆಗೆ ಲಿಪಿ ಇಲ್ಲ. ಆದರೂ ಹಿಂದೀ ಭಾಷೆಯನ್ನು ಉಪಯೋಗಿಸಿ ಸಂಸ್ಕೃತ ಭಾಷೆಯಲ್ಲಿ ಗ್ರಂಥಗಳನ್ನು ಬರೆದಿದ್ದಾನೆ.

**16) ಪ್ರಶ್ನೆ :– ಹಿಂದೀ ಭಾಷೆ ಸಂಸ್ಕೃತ ಭಾಷೆಗಿಂತಲೂ ಸುಲಭವಾದಾಗ ಹಿಂದಿಯಲ್ಲಿಯೇ ಬರೆಯಬಹುದಲ್ಲವೇ?**

**ಉತ್ತರ :–** ಕೆಲವರು ಸಂಸ್ಕೃತವನ್ನು ಕಲಿತವರು ಅದು ಕಷ್ಟವಾದ ಭಾಷೆಯೆಂದು ತಿಳಿದು, ಉಚ್ಚಾರಣೆಯಲ್ಲಿ ಅನೇಕ ತಪ್ಪುಗಳು ಇರುತ್ತವೆಂದು ತಿಳಿದು, ಅದನ್ನು ಇತರರು ಕಲಿಯುವುದಕ್ಕೆ ಕಷ್ಟವಾಗಿರುವುದರಿಂದ ಸಂಸ್ಕೃತವನ್ನೇ ಧಾರ್ಮಿಕ ಭಾಷೆಯೆಂದು, ದೇವರಿಗೆ ಹತ್ತಿರವಾಗಿರುವ ಭಾಷೆಯೆಂದು, ದೇವತೆಗಳೆಲ್ಲರೂ ಸಂಸ್ಕೃತದಲ್ಲಿಯೇ ಮಾತನಾಡುತ್ತಿರುತ್ತಾರೆಂದು, ಅದರಿಂದ ಅದೇ ಭಾಷೆಯಲ್ಲಿಯೇ ಏನು ಬರೆದರೂ ಬರೆಯಬೇಕೆಂದು ನಿಯಮವನ್ನು ಇಟ್ಟಿದ್ದಾರೆ. ಹಿಂದೂಮತದಲ್ಲಿ ಜ್ಞಾನ ಹಿರಿಯರೆಂದೋ, ದೈವಜ್ಞಾನಿಗಳೆಂದೋ ಹೆಸರುಗಳಿಸಿರುವವರೇ ಉಳಿದ ಪ್ರಜೆಗಳೆಲ್ಲರೂ ತಮ್ಮ ಮಾತನ್ನು ಕೇಳುವುದಕ್ಕೆ, ಪ್ರಜೆಗಳಲ್ಲಿ ತಮ್ಮ ಆಧಿಪತ್ಯ ಇರುವುದಕ್ಕೆ ಹಾಗೆ ಸಂಸ್ಕೃತ ಭಾಷೆಯನ್ನು ಅಡ್ಡ ಇಟ್ಟುಕೊಂಡಿದ್ದಾರೆ. ವಾಸ್ತವವಾಗಿ ಸಂಸ್ಕೃತವು ಬೆಲೆಯಿಲ್ಲದ ಭಾಷೆ, ಅದಕ್ಕಿಲ್ಲದ ಗೌರವವನ್ನು ಇರಿಸುವುದರಿಂದ ತಮ್ಮ ಹಿರಿತನ ಪ್ರಜೆಗಳಲ್ಲಿ ಇರುತ್ತದೆಂದು, ಸಂಸ್ಕೃತವನ್ನು ಕಲಿತ ಒಂದು ಗುಂಪಿನವರು ಹೂಡಿದ ಒಳಸಂಚೇ ಸಂಸ್ಕೃತವನ್ನು ಓದಬೇಕೆಂದು ಹೇಳುವುದು. ಭಾಷೆಯನ್ನು ಅಡ್ಡವಿಟ್ಟುಕೊಂಡು ತಮ್ಮ ಅಧಿಕಾರ ಚಲಾಯಿಸುತ್ತಾ, ಭಾಷೆಯನ್ನು ಅನುಸರಿಸಿ ಇವರು ಜ್ಞಾನಿಗಳೆಂದು, ಇವರು ಅಜ್ಞಾನಿಗಳೆಂದು ನಿರ್ಣಯಿಸಿ ಹೇಳುತ್ತ, ತಾವು ಹಿರಿಯರಾಗಿ ಜ್ಞಾನವನ್ನು ನಿರ್ಣಯಿಸುವವರಾಗಿ ಚಲಾವಣೆ ಆಗುತ್ತಾ ಪ್ರಜೆಗಳಿಂದ ಗೌರವಿಸಲ್ಪಡುತ್ತಿದ್ದಾರೆ. ಬಾರದ ಭಾಷೆಯನ್ನು, ಕಷ್ಟವಾದ ಭಾಷೆಯನ್ನು ಪ್ರಜೆಗಳ ಮೇಲೆ ಉಜ್ಜಿ, ಒಂದು ಪದವನ್ನು ನುಡಿದರೇ ಹಾಗೆ ನುಡಿಯಬಾರದು ಹೀಗೆಯೇ ನುಡಿಯಬೇಕೆಂದು ಹೇಳಿ, ಅವರು ನುಡಿದಂತೇ ನುಡಿದರೂ ಇದು ತಪ್ಪು ಎಂದು ಹೇಳುತ್ತಾ ಮನುಷ್ಯನನ್ನು ತಮ್ಮ ಮುಂದೆ ಕಡಿಮೆಯವನೆಂದು ಭಾವಿಸುವಂತೆ ಮಾಡುತ್ತಿದ್ದಾರೆ. ಸಂಸ್ಕೃತ ಭಾಷೆ ಬಂದವರಿಗಿಂತಲೂ ಉಳಿದವರು ಎಲ್ಲಾ ವಿಧಗಳಲ್ಲಿ ಕಡಿಮೆಯವರೆಂಬ ಭಾವನೆ ಬರುವಂತೆ ಮಾಡಿ ಒಂದು ಕುಲಕ್ಕೆ ಹೊರತುಪಡಿಸಿ ಉಳಿದ ಕುಲಗಳವರಿಗೆ

ಸಂಸ್ಕೃತ ಕಲಿಯುವ ಅವಕಾಶವೇ ಕೊಡಲಿಲ್ಲ. ಇತರ ಕುಲಗಳವರು ಸಂಸ್ಕೃತವನ್ನು ಕಲಿಯಬೇಕೆಂದರೂ ಅವರು ಅದಕ್ಕೆ ಅರ್ಹರಲ್ಲವೆಂದು ಹೇಳುತ್ತಿದ್ದರು. ಸಂಸ್ಕೃತ ಭಾಷೆಯನ್ನು ಕಳ್ಳತನದಿಂದ ಕಲಿತರೂ, ಸಂಸ್ಕೃತ ಭಾಷೆಯಲ್ಲಿರುವ ವೇದಗಳನ್ನು, ಉಪನಿಷತ್ತುಗಳನ್ನು ಓದಬಾರದೆಂದು ಆಕ್ಷೇಪಣೆಗಳಿಡುತ್ತಿದ್ದರು. ಕಳ್ಳತನದಿಂದ ಓದಿದ್ದಾನೆಂದು ತಿಳಿದರೂ ಶೂದ್ರರು ವೇದಗಳು ಓದಬಾರದೆಂಬ ನಿಯಮವನ್ನು ತೋರಿಸಿ ಅದಕ್ಕೆ ಶಿಕ್ಷೆಯನ್ನು ಹಾಕುತ್ತಿದ್ದರು.

ರಾಜರು ಸಹಿತ ಅವರ ಮಾತು ಕೇಳುವುದರಿಂದ, ರಾಜರ ಆಸ್ಥಾನದಲ್ಲಿ ಆಸ್ಥಾನ ಪಂಡಿತರಾಗಿ ಒಂದು ವರ್ಗದವರೇ ಇರುವುದರಿಂದ, ರಾಜರನ್ನು ಅವರ ಮಾತು ಕೇಳುವಂತೆ ಮಾಡಿಕೊಂಡು, ವೇದಗಳನ್ನು ಇತರ ವರ್ಗಗಳವರು ಓದಿದವರೇ ರಾಜರಿಗೆ ಹೇಳಿ, ರಾಜರ ಮುಖಾಂತರ ವೇದಗಳು ಓದಿದವರಿಗೆ ಶಿಕ್ಷೆಯನ್ನು ಹಾಕುತ್ತಿದ್ದರು. ಆ ಶಿಕ್ಷೆಗಳಿಗೆ ಭಯಪಟ್ಟು ಶೂದ್ರರು ವೇದಗಳನ್ನು ಓದುವುದು ಬಿಟ್ಟು ಹಾಕಿದ್ದಾರೆ. ಹಾಗೆಯೇ ಸಂಸ್ಕೃತವನ್ನು ಕಲಿಯುವುದು ಕೂಡಾ ಬಿಟ್ಟುಹಾಕಿದ್ದಾರೆ. ಹಾಗೆ ಇತರರನ್ನು ಸಂಸ್ಕೃತ ಭಾಷೆ ತಿಳಿಯದಂತೆ ಮಾಡಿ. ಸಂಸ್ಕೃತ ಬಾರದವರಿಗೆ ಜ್ಞಾನ ತಿಳಿದಿಲ್ಲವೆಂದೂ, ಸಂಸ್ಕೃತ ಭಾಷೆ ಬರುವ ನಮಗೆ ಮಾತ್ರವೇ ದೈವಜ್ಞಾನ ತಿಳಿಯುವುದೆಂದು, ಇತರರಿಗೆ ತಿಳಿಯದೆಂದು ಹೇಳಿ, ಗುರುಗಳ ಸ್ಥಾನದಲ್ಲಿ ಶಾಶ್ವತವಾಗಿ ತಾವೇ ಇರುವಂತೆ ಮಾಡಿಕೊಂಡಿದ್ದಾರೆ. ಈ ವಿಧಾನವು ಪೂರ್ವದಿಂದ ಸಾಗುತ್ತಲೇ ಬರುತ್ತಿದೆ. ಭಾಷೆಯನ್ನು ಅಡ್ಡವಿಟ್ಟುಕೊಂಡು, ಭಾಷೆಯನ್ನು ತಾವೇ ಕಲಿತು ಇತರರಿಗೆ ತಿಳಿಯದಂತೆ ಮಾಡಿ, ಚಿಕ್ಕ ದೊಡ್ಡ ವಿಷಯಗಳಿಗೆ ಅವರನ್ನೇ ಆಶ್ರಯಿಸುವಹಾಗೆ ಮಾಡಿಕೊಂಡಿದ್ದಾರೆ. ಈ ವಿಧವಾಗಿ ತಮಗೇ ಬ್ರಹ್ಮಜ್ಞಾನ ತಿಳಿಯುವುದೆಂದು, ಇತರರಿಗೆ ಸಂಸ್ಕೃತ ಬಾರದೆ ಇರುವುದರಿಂದ ಅವರಿಗೆ ದೈವಜ್ಞಾನವೇ ತಿಳಿದಿಲ್ಲವೆಂದು, ಜ್ಞಾನ ವಿಷಯಗಳಲ್ಲಾಗಲೀ, ಪ್ರಪಂಚ ವಿಷಯಗಳಲ್ಲಾಗಲೀ ಶೂದ್ರರನ್ನು ಮುಂದಕ್ಕೆ ಬಾರದಂತೆ ಮಾಡಿ ಶೂದ್ರರ ಮೇಲೆ ಆಧಿಪತ್ಯವನ್ನು ಚಲಾಯಿಸುತ್ತಿದ್ದಾರೆ.

**17) ಪ್ರಶ್ನೆ :– ಪಂಡಿತರು ಎನಿಸಿಕೊಂಡವರು ಈದಿನ ಗುರುಗಳಾಗಿದ್ದು, ಸಂಸ್ಕೃತ ಕಲಿತವರು ಯಾರೂ ಇಲ್ಲದೇ ಹೋಗಿರುವುದರಿಂದ ಪಂಡಿತರದ್ದೇ ಮೇಲ್ಸೈ ಯಾಗಿದೆ. ನಾಗರಿಕತೆ ತಿಳಿದ ಈ ದಿನಗಳಲ್ಲಿ ಕೂಡಾ ಭಾಷೆಗೆ ಪ್ರಾಧಾನ್ಯತೆ ಕೊಡುತ್ತಿದ್ದಾರೆ. ಆದ್ದರಿಂದ ಈದಿನ ಸಮಾಜದಲ್ಲಿ ಸಂಸ್ಕೃತ ಪಂಡಿತರೇ ಗುರುಗಳಾಗಿ ಇದ್ದಾರೆ, ಜ್ಞಾನಿಗಳಾಗಿ ಕಾಣಿಸುತ್ತಿದ್ದಾರೆ.**

**ಉತ್ತರ :–** ನಿಜವೇಯೆಂದು ನಾವು ಕೂಡಾ ಹೇಳುತ್ತಿದ್ದೇವೆ. ಪಂಡಿತರಾದವರು ತಮಗೆ ಬಂದಿರುವ ಸಂಸ್ಕೃತ ಭಾಷೆಯನ್ನು ಅಡ್ಡವಿಟ್ಟುಕೊಂಡು ಸಂಸ್ಕೃತ ಭಾಷೆಬಾರದ ಉಳಿದವರೆಲ್ಲರನ್ನು ತಮಗಿಂತಲೂ ಕಡಿಮೆಯವರನ್ನಾಗಿ ಮಾಡಿ ತೋರಿಸುವುದಕ್ಕೆ ಮಾಡಿರುವ ಕುತಂತ್ರ ಪೂರಿತವಾದ ಉಪಾಯವೆಂದು ತಿಳಿಯುತ್ತಿದೆ. ಸಂಸ್ಕೃತ ಭಾಷೆಯನ್ನು ಕಲಿತ ಒಂದು ಜಾತಿ ಪಂಡಿತರು ಆ ಭಾಷೆಯನ್ನು ಇತರರಿಗೆ ಸಂಬಂಧವಿಲ್ಲದೇ ಮಾಡಿ ಸಂಸ್ಕೃತ ಕಲಿಯದವರು ಜ್ಞಾನಿಗಳೇ ಅಲ್ಲವೆಂದಿದ್ದಾರೆ. ಅಷ್ಟೇಅಲ್ಲದೇ ಆ ಭಾಷೆಯಲ್ಲಿ ಒಂದು ಮಂತ್ರವನ್ನು ತಯಾರಿ ಮಾಡಿ, ಅದಕ್ಕೆ ಗಾಯಿತ್ರೀ ಮಂತ್ರವೆಂದು ಹೆಸರಿಟ್ಟು ಜ್ಞಾನಿಯಾದವನು ಗಾಯಿತ್ರೀ ಮಂತ್ರವನ್ನು ಮುಂಜಾನೆ, ಸಾಯಂಕಾಲ ಓದಬೇಕೆಂದು, ಗಾಯಿತ್ರೀ ಮಂತ್ರವನ್ನು ಪಠಿಸದವನು ಜ್ಞಾನಿಯಲ್ಲವೆಂದು ಪ್ರಚಾರ ಮಾಡಿದ್ದಾರೆ. ಗಾಯಿತ್ರೀ ಮಂತ್ರವನ್ನು ಓದುವುದಕ್ಕೆ ಬ್ರಾಹ್ಮಣ, ವೈಶ್ಯ, ಕ್ಷತ್ರಿಯರೇ ಅರ್ಹರೆಂದು ಕೂಡಾ ಹೇಳಿದ್ದಾರೆ. ಶೂದ್ರರು ಗಾಯಿತ್ರೀ ಮಂತ್ರವನ್ನು ಓದಬಾರದೆಂದು ಹೇಳಿದ್ದಾರೆ. ಒಂದು ಸಂದರ್ಭದಲ್ಲಿ ಶೂದ್ರರು ಯಾಕೆ ಓದಬಾರದೆಂದು ಪ್ರಶ್ನಿಸಿದರೇ, ಅದಕ್ಕೆ ಉತ್ತರವಾಗಿ ಅವರಿಗೆ ಸಂಸ್ಕೃತ ಬರುವುದಿಲ್ಲ. ಆದ್ದರಿಂದ ಓದಬಾರದೆಂದು ಹೇಳಿದ್ದಾರೆ. ಬಾಯಿತಿರುಗದ ಭಾಷೆ ಸಂಸ್ಕೃತ, ಅದನ್ನು ಕಲಿಯಬೇಕೆಂದರೇ ಕಷ್ಟ. ಇನ್ನೊಂದು ವಿಧವಾಗಿ ಸಂಸ್ಕೃತ ಪಾಠಶಾಲೆಗಳಲ್ಲಿ ಶೂದ್ರರಿಗೆ ಪ್ರವೇಶವಿಲ್ಲ. ಆಗ ಸಂಸ್ಕೃತ ಭಾಷೆಯನ್ನು ಕಲಿಯುವುದಕ್ಕೆ ಅವಕಾಶವಿರುವುದಿಲ್ಲ. ಹಾಗಿರುವಾಗ ಸಂಸ್ಕೃತ ಭಾಷೆಯನ್ನು ತೆಲುಗು ಭಾಷೆಯೊಳಗೆ ಅನುವಾದಿಸಿ ಓದಿಕೊಂಡರೇ ಅದರಿಂದ ಗಾಯಿತ್ರೀ ಮಂತ್ರವನ್ನು ನಿಯಮ ತಪ್ಪದೇ ಪಠಿಸಬಹುದು ಅಲ್ಲವೇ!

ಎಂದು ಅಂದಾಗ ಹಾಗೆ ಪಂಡಿತರಾದವರು ಒಪ್ಪಿಕೊಳ್ಳುತ್ತಿಲ್ಲ. ಇವರು ಸಂಸ್ಕೃತವನ್ನು ತೆಲುಗು ಭಾಷೆಯೊಳಗೆ ಅನುವಾದಿಸುತ್ತಿಲ್ಲ. ಗಾಯಿತ್ರೀ ಮಂತ್ರವನ್ನು ಸಂಸ್ಕೃತ ಭಾಷೆಯಲ್ಲಿಯೇ ಓದಬೇಕು ಎನ್ನುತ್ತಿದ್ದಾರೆ. ಸಂಸ್ಕೃತ ದಲ್ಲಿಯೇ ದೇವರು ಕೇಳಿಸಿಕೊಳ್ಳಬಲ್ಲನು ಎಂದು ಕೂಡಾ ಹೇಳುತ್ತಿದ್ದಾರೆ. ಸಂಸ್ಕೃತಕ್ಕೆ ದೇವರಿಗೆ ಏನು ಸಂಬಂಧವೆಂದು ಪ್ರಶ್ನಿಸಿದರೇ, ದೇವರು ಜ್ಞಾನವನ್ನು ಸಂಸ್ಕೃತದಲ್ಲಿಯೇ ಹೇಳಿದ್ದಾನೆ, ಗಾಯಿತ್ರೀ ಮಂತ್ರವು ಮೊದಲು ಸಂಸ್ಕೃತದಲ್ಲಿಯೇ ತಯಾರಾಗಿದೆ, ಆದ್ದರಿಂದ ಅದನ್ನು ಎಂದಾದರೂ ಸಂಸ್ಕೃತದಲ್ಲಿಯೇ ಓದಬೇಕಾಗಿರುತ್ತದೆ. ಮೊದಲು ಯಾವ ಭಾಷೆಯಲ್ಲಿ ತಯಾರಾದರೇ ಅದೇ ಅದಕ್ಕೆ ಜನ್ಮ ಭಾಷೆ. ಅದನ್ನು ಬೇರೆ ಭಾಷೆಯೊಳಗೆ ಬದಲಾಯಿಸಿದರೇ ಗಾಯಿತ್ರೀ ಮಂತ್ರವನ್ನು ಹತ್ಯೆ ಮಾಡಿದರೊಂದಿಗೆ ಸಮಾನವಾಗುತ್ತದೆ ಎಂದು ಹೇಳುತ್ತಿದ್ದಾರೆ. ಗಾಯಿತ್ರೀ ಮಂತ್ರವನ್ನು ನಿತ್ಯ ಎರಡು ಬಾರಿ ಓದಬೇಕು. ಹಾಗೆ ಓದಿದವನೇ ಜ್ಞಾನಿ ಎಂದು ಹೇಳುತ್ತಿದ್ದಾರೆ. ಸಂಸ್ಕೃತ ಬಾರದೇ ಇರುವವರು ಓದಬಾರದೆಂದು ಹೇಳುವವರೂ ಅವರೇ, ಶೂದ್ರರು ಸಂಸ್ಕೃತವನ್ನು ಕಲಿಯಬಾರದೆಂದು ಹೇಳುವುದೂ ಅವರೇ, ಸಂಸ್ಕೃತ ಭಾಷೆಯನ್ನು ಬೇರೆ ಭಾಷೆಯೊಳಗೆ ಬದಲಾಯಿಸಬಾರದೆನ್ನುವುದೂ ಅವರೇ. ಇದನ್ನು ಅನುಸರಿಸಿ ನೋಡಿದರೆ ಲೋಕದಲ್ಲಿ ಪಂಡಿತರಾಗಿ ಇರುವವರು ಸಂಸ್ಕೃತ ಬವರು ಒಂದು ಕುಲದವರು ಮಾತ್ರವೇ ಜ್ಞಾನಿಗಳಾಗಿ ಇರಬೇಕೆಂದೂ, ಉಳಿದವರು ಯಾರೂ ಜ್ಞಾನಿಗಳಾಗ ಬಾರದೆಂದೇ ಅಲ್ಲವೇ! ಅವರ ಭಾವನೆ. ಹೀಗೆ ನೀಚಪೂರಿತ ಉದ್ದೇಶದಿಂದ ಕೆಲವರು ಪಂಡಿತರೆನ್ನುವವರು ಇರುವುದರಿಂದ ಉಳಿದವರು ಅವರ ಕೆಳಗಿನವರಾಗಿ ಇರಬೇಕಾಗಿ ಬರುತ್ತಿದೆ. ಅವರು ತಮ್ಮ ಆಧಿಪತ್ಯವನ್ನು ಎಲ್ಲರ ಮೇಲೆ ಚಲಾಯಿಸುವುದಕ್ಕೆ ಹಾಗೆ ಭಾಷೆಯನ್ನು ಅಡ್ಡವಿಟ್ಟುಕೊಂಡಿದ್ದಾರೆ.

**18) ಪ್ರಶ್ನೆ :– ಹಿಂದೂಗಳಲ್ಲಿ ಕೆಲವರು ಸಂಸ್ಕೃತ ಭಾಷೆ ಬಂದವರು ತಮ್ಮ ಆಧಿಪತ್ಯವನ್ನು ಸಾಧಿಸುವುದಕ್ಕೆ ಗಾಯತ್ರಿ ಮಂತ್ರವನ್ನು ಒಂದು ಆಯುಧವಾಗಿ ಉಪಯೋಗಿಸಿಕೊಳ್ಳುತ್ತಿದ್ದಾರೆ. ದುಷ್ಟಪಂಡಿತರಾದವರಿಗೆ ಆಯುಧವಾಗಿ ಉಪ**

**ಯೋಗಪಡುವ ಗಾಯತ್ರಿ ಮಂತ್ರ ಹೇಗಿರುತ್ತದೋ ಒಂದುಬಾರಿ ಹೇಳಿರಿ. ಆ ಮಂತ್ರವು ಹೇಗಿದೆಯೋ ನಾವು ಕೂಡಾ ನೋಡುತ್ತೇವೆ?**

**ಉತ್ತರ :–** ಮುಸ್ಲಿಮ್‌ರಲ್ಲಿ ನಮಾಜ್ (ದೇವರ ಪ್ರಾರ್ಥನೆ) ಮಾಡುವಾಗ ಏಳು ಸಂಖ್ಯೆಯಿರುವ ಆಯತ್‌ಗಳನ್ನು (ವಾಕ್ಯಗಳನ್ನು) ಪಠಿಸುತ್ತಿರುತ್ತಾರೆ. ಹಾಗೆಯೇ ಹಿಂದೂಗಳು ಪೂರ್ವದಿಂದಲೂ ದೇವರ ಪ್ರಾರ್ಥನೆ ಮಾಡುವಾಗ ಹನ್ನೊಂದು ಸಂಖ್ಯೆ ಇರುವ ಮಂತ್ರಗಳನ್ನು (ಮಾತುಗಳನ್ನು) ಪಠಸುತ್ತಿರುತ್ತಾರೆ. ಏಳು ವಾಕ್ಯಗಳ ನಮಾಜನ್ನು ಐದುಹೊತ್ತು ಮುಸ್ಲಿಮ್‌ರು ಮಾಡುತ್ತಿರುತ್ತಾರೆ. ಹನ್ನೊಂದು ಮಾತುಗಳ ಗಾಯಿತ್ರೀಯನ್ನು ಮೂರು ಹೊತ್ತು ಮಾಡಬೇಕು. ಆದರೇ ಹಿಂದೂಗಳು ಮಧ್ಯಾಹ್ನವೇಳೆ ಬಿಟ್ಟು ಮುಂಜಾನೆ, ಸಾಯಂಕಾಲ ಸಂಧ್ಯಾವೇಳೆ ಯಲ್ಲಿ ಮಾತ್ರ ಗಾಯಿತ್ರೀ ಮಂತ್ರವನ್ನು ಪಠನೆ ಮಾಡುತ್ತಿರುತ್ತಾರೆ. ವಾಸ್ತವವಾಗಿ ಸಂಧ್ಯಾವಂದನೆಗಳು ಎರಡೇ ಅಲ್ಲದೇ ಮಧ್ಯ ವಂದನೆ ಕೂಡಾ ಇದೆ. ಹಿಂದೂಗಳಲ್ಲಿ ಪಂಡಿತರು ತಮ್ಮ ಇಷ್ಟವಿರುವಂತೆ ಮುಂಜಾನೆ, ಸಾಯಂಕಾಲ ಎರಡು ಹೊತ್ತುಗಳಿಗೇ ಪರಿಮಿತಿ ಆಗಿದ್ದಾರೆ. ಸಂಧ್ಯಾವೇಳೆಯಲ್ಲಿ ಮಾತ್ರ ಮಾಡಿದರೇ ಸರಿಹೊಗುತ್ತದೆ ಎಂದು ಹೇಳುತ್ತಿದ್ದಾರೆ. ಕೊನೆಗೆ ಅದರ ಹೆಸರೇ ಸಂಧ್ಯಾವಂದನೆ ಎಂದು ಬದಲಾಯಿಸಿಬಿಟ್ಟಿದ್ದಾರೆ. ಮುಸ್ಲಿಮ್‌ರಲ್ಲಿ ಐದುಹೊತ್ತು ನಮಾಜ್‌ನು ಎಲ್ಲರೂ ಮಾಡುತ್ತಿಲ್ಲ. ಕೆಲವರು ಕೆಲವು ನಮಾಜ್‌ಗಳನ್ನೇ ಮಾಡುತ್ತಾ ಎರಡು ಮೂರು ನಮಾಜ್‌ಗಳಿಗೇ ಪರಿಮಿತಿ ಯಾಗಿದ್ದಾರೆ. ಆದರೂ ಕೆಲವು ದಿನಗಳಲ್ಲಿಯಾದರೂ ಐದು ಹೊತ್ತು ನಮಾಜನ್ನು ಮಾಡುತ್ತಾರೆ. ಹಿಂದೂಗಳು ಹಾಗಲ್ಲದೇ ಮಧ್ಯಾಹ್ನ ಪ್ರಾರ್ಥನೆಯನ್ನು ಪೂರ್ತಿ ಯಾಗಿ ಬಿಟ್ಟುಹಾಕಿ, ಎರಡು ಸಂಧ್ಯಾಕಾಲಗಳಲ್ಲಿ ಮಾಡುವ ಪ್ರಾರ್ಥನೆಗೇ ಪರಿಮಿತಿ ಯಾಗಿದ್ದಾರೆ. ಪೂರ್ವವು ಮಧ್ಯಾಹ್ನ ವೇಳೆಯಲ್ಲು ಕೂಡಾ ಸಂಧ್ಯಾವಂದನೆ ಇದೆಯೆಂದು ಹಿಂದೂಗಳು ಪೂರ್ವದಲ್ಲಿ ಹೇಳುತ್ತಿದ್ದರು.

ಪೂರ್ವದಿಂದ ಹಿಂದೂಗಳ ಆರಾಧನೆ ಗಾಯಿತ್ರೀ ಮಂತ್ರವೆಂದು ಪ್ರಚಾರ ಮಾಡಿದ್ದಾರೆ. ಗಾಯಿತ್ರೀ ಮಂತ್ರವು ಹನ್ನೊಂದು ಮಾತುಗಳ ಸಮ್ಮೇಳನ

ಎಂದು ಹೇಳಬಹುದು. ಅದು ಹೀಗಿದೆ. "ಓಂ ಭೂಃ, ಓಂ ಭುವಃ, ಓಂ ಸುವಃ, ಓಂ ಮಹಾಃ, ಓಂ ಜನಃ, ಓಂ ತಪಃ, ಓಂ ಸತ್ಯಂ, ಓಂ ತತ್ಸವಿತುರ್ವರೇಣ್ಯಂ, ಭರ್ಗೋರ್ದೇವಸ್ಯ ಧೀಮಹಿ, ಧಿಯೋ ಯೋನಃ ಪ್ರಚೋದಯಾತ್, ಓಂ ಆಸೋ ಜ್ಯೋತೀ ರಸೋಮೃತಂ ಬ್ರಹ್ಮ ಭೂರ್ಭುವ ಸ್ವರೋಂ" ಈ ವಿಧವಾಗಿ ಇರುವ ಸಮ್ಮೇಳನ ಗಾಯಿತ್ರೀ ಮಂತ್ರವನ್ನು ಪಂಡಿತರು, ಪ್ರಜೆಗಳ ದೃಷ್ಠಿಯಲ್ಲಿ ಜ್ಞಾನಿಗಳು ಎನಿಸಿಕೊಂಡವರು, ಮೂರು ಹೊತ್ತು ಆರಾಧನೆಯಾಗಿ ಮಾಡುತ್ತಿದ್ದರು, ಕಾಲಕ್ರಮದಲ್ಲಿ ಅದುಸ್ವಲ್ಪ ಎರಡು ಹೊತ್ತು ಆರಾಧನೆಯಾಗಿ ಬದಲಾಗಿದೆ. ಈ ಮಧ್ಯಕಾಲದಲ್ಲಿ ನೂರು ವರ್ಷಗಳಿಂದ ಉದ್ಯೋಗ ಮಾಡಿ ಬದುಕುವವರಿರುವುದರಿಂದ ಅವರ ಉದ್ಯೋಗಗಳ ಅನುಕೂಲತೆಯನ್ನು ಅನುಸರಿಸಿ ಎರಡು ಹೊತ್ತು ಕೂಡಾ ಮಾಡದೇ ಒಂದು ಹೊತ್ತಿಗೇ ಸಂಧ್ಯಾವಂದನೆಯನ್ನು ತಗ್ಗಿಸಿಕೊಂಡಿದ್ದಾರೆ. ಕೆಲವರು ಒಂದುಹೊತ್ತು ಕೂಡಾ ಮಾಡದೇ ಬಿಟ್ಟಿದ್ದಾರೆ. ಹಿಂದೂಗಳಲ್ಲಿ ಜ್ಞಾನದಪ್ರಕಾರ ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ ಲೆಕ್ಕಿಸಿ ನೋಡಿದರೆ ಗಾಯಿತ್ರೀ ಮಂತ್ರವನ್ನು ಜಪಿಸುವುದು ಧರ್ಮವೇ ಅಲ್ಲ. ಧರ್ಮವಲ್ಲದಿರುವುದನ್ನು ಕೂಡಾ ಸರಿಯಾಗಿ ಆಚರಿಸದೆ ಮೂರರಿಂದ ಒಂದು ಆರಾಧನೆಗೆ, ಒಂದರಿಂದ ಪೂರ್ತಿ ಇಲ್ಲದೇ ಮಾಡಿಕೊಂಡಿದ್ದಾರೆ. ಅದೇ ಮುಸ್ಲೀಮ್‌ರು ಕೆಲವರಾದರೂ ಐದು ಹೊತ್ತು ನಮಾಜ್ ಮಾಡುವುದು ಹಿಂದೂಗಳಿಗಿಂತಲೂ ಬಹಳ ಮೇಲು ಎನಿಸುತ್ತಿದೆ.

**19) ಪ್ರಶ್ನೆ :– ಹಿಂದೂಗಳು ಕೃತಯುಗದಿಂದ ಇದ್ದಾರೆ. ಮುಸ್ಲಿಮ್‌ರು ಕಲಿಯುಗದಲ್ಲಿ 3600 ವರ್ಷಗಳು ಕಳೆದ ನಂತರ ಬಂದಿದ್ದಾರೆ. ಹಿಂದೂಗಳು ಪೂರ್ವವೇ ಗಾಯಿತ್ರೀ ಮಂತ್ರವನ್ನು ತಯಾರಿ ಮಾಡಿಕೊಂಡಂತೆ ಮುಸ್ಲಿಮ್‌ರು ಕೂಡಾ ದೇವರ ಆರಾಧನೆಯ ವಿಷಯವಾಗಿ ಏಳು ವಾಕ್ಯಗಳ ನಮಾಜನ್ನು ತಯಾರಿ ಮಾಡಿಕೊಂಡಿದ್ದಾರೆ ಎಂದು ತಿಳಿದಿದೆ. ಹಿಂದೂಗಳ ಧರ್ಮದಲ್ಲಿ ದೇವರು ಕೊಟ್ಟಿರುವ ಗ್ರಂಥದಲ್ಲಿ ಬ್ರಹ್ಮವಿದ್ಯಾಶಾಸ್ತ್ರದ ಪ್ರಕಾರ ಗಾಯಿತ್ರೀ ಮಂತ್ರವಿಲ್ಲ. ಆದರೇ ಮನುಷ್ಯರೇ ಅದನ್ನು ತಯಾರಿ ಮಾಡಿಕೊಂಡಿದ್ದಾರೆಂದು ತಿಳಿಯಿತು. ಮುಸ್ಲಿಮ್‌ರಲ್ಲಿ**

**ಪ್ರಾರ್ಥನೆ ಅವರ ಗ್ರಂಥದಲ್ಲಿ ದೇವರು ಹೇಳಿದ್ದಾನಾ! ಅಥವಾ ಮುಸ್ಲಿಮ್‌ರೇ ತಯಾರಿ ಮಾಡಿಕೊಂಡಿದ್ದಾರಾ?**

**ಉತ್ತರ :– 'ನಮಾಜ್'** ಎನ್ನುವ ಮಾತು ಅಂತಿಮ ದೈವಗ್ರಂಥ ಖುರಾನ್‌ನಲ್ಲಿ ಇರುವುದು ವಾಸ್ತವವೇ. ನಮಾಜ್ ಎಂದರೇ ದೇವರ ಆರಾಧನೆ. ದೇವರ ಆರಾಧನೆ ಪ್ರತ್ಯೇಕವಾದುದು. ಅದು ಮಾತುಗಳಿಂದ ಕೂಡಿಕೊಂಡಿರುವುದಿಲ್ಲ. ಈದಿನ ನಮಾಜ್ ಎಂದು ದೇವರ ಪ್ರಾರ್ಥನೆಯನ್ನು ಹೇಳುತ್ತಿದ್ದೇವೆ. ದೇವರ ದೃಷ್ಠಿಯಲ್ಲಿ ಇಲ್ಲಿಯವರೆಗು ಮನುಷ್ಯರು ನಮಾಜ್ ಮಾಡಲಿಲ್ಲವೆನ್ನುವ ಭಾವನೆಯಿಂದ ಈಗ ಯಾರಾದರೇ ನಮಾಜನ್ನು ನೆಲೆಗೊಳಿಸುತ್ತಾರೋ ಎಂದು ಹೇಳಿದ್ದಾರೆ. ನಮಾಜ್ ಎಂಬ ಪ್ರಾರ್ಥನೆಯನ್ನು ಮುಸ್ಲಿಮ್ ಸಮಾಜ ಒಟ್ಟಾರೆ ಪ್ರತಿ ದಿನ ಮಾಡುತ್ತಿದೆ. ಪ್ರಪಂಚದಲ್ಲಿ ಎಲ್ಲ ಮತಗಳಿಗಿಂತಲೂ ಹೆಚ್ಚು ಪ್ರಾರ್ಥನೆಯಲ್ಲಿ ಕಾಲ ಕಳೆಯುವವರು, ಹೆಚ್ಚಾಗಿ ಪ್ರಾರ್ಥನೆ ಮಾಡುವವರು ಮುಸ್ಲಿಮ್ ಮತದಲ್ಲಿದ್ದಾರೆ. ಹಾಗಿರುವಾಗ ನೀವು (ಮನುಷ್ಯರು) ನಮಾಜ್ (ಪ್ರಾರ್ಥನೆ) ಮಾಡಲಿಲ್ಲವೆಂದು ಹೇಳುತ್ತಿದ್ದೀರಲ್ಲಾ? ಎಂದು ಕೇಳಬಹುದು. ಅದಕ್ಕೆ ನನ್ನ ಉತ್ತರ ಈ ವಿಧವಾಗಿದೆ. ಮುಸ್ಲಿಮ್‌ರು ಉಳಿದ ಎರಡು ಮತಗಳಿಗಿಂತಲೂ ಪ್ರಾರ್ಥನೆ ವಿಷಯದಲ್ಲಿ ಮುಂದಿದ್ದಾರೆ. ಅವರ ಜೀವನದಲ್ಲಿ ಪ್ರಾರ್ಥನೆಗೇ ಹೆಚ್ಚು ಪ್ರಾಧಾನ್ಯತೆಯನ್ನು ಕೊಡುತ್ತಿದ್ದಾರೆ. ಆದರೇ ಅವರು ಮಾಡುವುದು ವಾಸ್ತವವಾಗಿ ಪ್ರಾರ್ಥನೆಯಲ್ಲ. ಈ ವಿಷಯವನ್ನು **'ತೌಹೀದೇ ಉಲೂ ಹಿಯತ್'** ಎಂಬ ಆರಾಧನೆಯ ಕ್ರಮದಲ್ಲಿ ಮುಸ್ಲಿಮ್ ಪಂಡಿತರೇ ಹೇಳಿದ್ದಾರೆ. ಯಾವ ಮಾತಾಗಲೀ, ಯಾವ ಮಂತ್ರವಾಗಲೀ ಪ್ರಾರ್ಥನೆಯಲ್ಲಿ ಇರಬಾರದು. ಒಂದು ಮಾತನ್ನು ಉಚ್ಚರಿಸುತ್ತಾ ಮಾಡುವ ಪ್ರಾರ್ಥನೆ ತಪಸ್ಸಿನ ಕೆಳಗೆ ಬರುತ್ತದೆ. ತಪ್ಪಸ್ಸು ಬೇರೆ, ಪ್ರಾರ್ಥನೆ ಬೇರೆ, ಪ್ರಾರ್ಥನೆಯನ್ನು **ಯೋಗ** ಎಂದು ಬ್ರಹ್ಮವಿದ್ಯಾ ಭಾಷೆಯಲ್ಲಿ ಹೇಳಬಲ್ಲೆವು. ಪ್ರಾಥನೆ ಯಾವುದೋ ತಿಳಿಯದೆ ತಪಸ್ಸನ್ನು ಆಚರಿಸುತ್ತಾ ತಾವು ಯೋಗ (ಪ್ರಾರ್ಥನೆ) ಮಾಡಿದ್ದೇವೆಂದು ಅಂದುಕೊಳ್ಳುತ್ತಿದ್ದಾರೆ. ಮನುಷ್ಯರು ಎಲ್ಲರೂ ತಪ್ಪಾಗಿ ಅರ್ಥೈಸಿಕೊಂಡು ಒಂದು

ಮಂತ್ರವನ್ನು ಜಪಿಸುವ ಹಿಂದೂ ತಾನು ಮಾಡುವುದು ಪ್ರಾರ್ಥನೆ ಎಂದು ಅಂದುಕೊಳ್ಳುತ್ತಿದ್ದಾನೆ. ಹಾಗೆಯೇ ಬಾಯಿ ಕದಲಿಸುತ್ತ ಮಾತುಗಳಿಂದ ಜೋರಾಗಿ ಕೇಳಿದಂತೆ ಮಾತನಾಡುತ್ತಾ ಕ್ರೈಸ್ತರು ಪ್ರಾರ್ಥನೆ ಮಾಡುತ್ತಿದ್ದಾರೆ. ಹಿಂದೂಗಳಿಗೆ ಮಂತ್ರಗಳು, ಕ್ರೈಸ್ತರಿಗೆ ಮಾತುಗಳಿರುವುದರಿಂದ ಅದು ಪ್ರಾರ್ಥನೆ ಆಗಲಿಲ್ಲ. ಹಾಗೆ ಮಾಡುವುದು ಪ್ರಾರ್ಥನೆ ಎಂದು ನಾವು ಅಂದುಕೊಂಡರೂ ಅದು ಪ್ರಾರ್ಥನೆಯಲ್ಲ ತಪಸ್ಸಾಗುತ್ತದೆ.

ಎರಡು ಮತಗಳಾಗಿರುವ ಹಿಂದೂಗಳಲ್ಲಿ, ಕ್ರೈಸ್ತರಲ್ಲಿ ಪ್ರಾರ್ಥನೆ (ಯೋಗ) ಇಲ್ಲ ಇರುವುದೆಲ್ಲಾ ತಪಸ್ಸೇ ಎಂದು ಅರ್ಥವಾಗಿದೆ. ದೇವರ ಪ್ರಾರ್ಥನೆ ವಿಷಯದಲ್ಲಿ ಮೊದಲ ವರಸೆಯಲ್ಲಿ ಇದ್ದಾರೆಂಬ ಮುಸ್ಲಿಮ್‌ರು ಕೂಡಾ ಮನಸ್ಸಿನಲ್ಲಿ ಏಳು ಆಯತ್‌ಗಳನ್ನು ಸ್ಮರಿಸುತ್ತಿರುವುದರಿಂದ ಅದು ಕೂಡಾ ತಪಸ್ಸಿನ ಕೆಳಗೇ ಬಂದಿದೆ. ತಪಸ್ಸುಗಳಿಗಿಂತಲೂ ಯೋಗವೇ ಶ್ರೇಷ್ಠವಾದುದು ಎಂದು ಪ್ರಥಮ ದೈವಗ್ರಂಥ ಭಗವದ್ಗೀತೆಯಲ್ಲಿ ಆತ್ಮ ಸಂಯಮ ಯೋಗದಲ್ಲಿ 46ನೇ ಶ್ಲೋಕದಲ್ಲಿ ಹೇಳಿದ್ದಾರೆ ನೋಡಿರಿ.

**ಶ್ಲೋಕ॥ 46. ತಪಸ್ವಿಭ್ಯೋಧಿಕೋ ಯೋಗೀ ಜ್ಞಾನಿಭ್ಯೋಪಿ ಮತೋಧಿಕಃ।**
**ಕರ್ಮಿಭ್ಯ ಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ॥**

**ಭಾವಾರ್ಥ :– "ಯೋಗೀ ತಪಸ್ವಿಗಳಿಗಿಂತಲೂ ಉತ್ತಮನು, ಅಧಿಕನು. ಕರ್ಮಗಳನ್ನು ಮಾಡುವವರಿಗಿಂತಲೂ ದೊಡ್ಡವನು. ಜ್ಞಾನಿಗಳಿಗಿಂತಲೂ ಘನವಂತನು. ಆದ್ದರಿಂದ ಅರ್ಜುನಾ ನೀನು ಯೋಗಿಯೇ ಆಗು"** ಎಂದು ಭಗವಂತನು ಅರ್ಜುನನಿಗೆ ಹೇಳಿದ್ದಾನೆ. ಈ ವಿಧವಾಗಿ ಯೋಗವು ತಪಸ್ಸಿಗಿಂತಲೂ ಶ್ರೇಷ್ಠವಾದ್ದರಿಂದ, ಯೋಗದಿಂದಲೇ ದೇವರು ತಿಳಿಯುವುದರಿಂದ, ತಪಸ್ಸುಗಳಿಂದ ದೇವರು ತಿಳಿಯುವುದಿಲ್ಲವಾದ್ದರಿಂದ, ತಿಳಿಯದೆ ಮಾಡುವ ತಪಸ್ಸುಗಳನ್ನು ಬಿಟ್ಟು ಯೋಗವೇ ಆಚರಿಸುವುದು ಒಳಿತು. ಇದೇ ವಿಷಯವನ್ನೇ ಅಂತಿಮ ದೈವಗ್ರಂಥದಲ್ಲಿ ಪ್ರಥಮ ವಾಕ್ಯಗಳಲ್ಲಿ (2–3) ವಾಕ್ಯದಲ್ಲಿ **'ನಮಾಜನ್ನು**

**ನೆಲೆಗೊಳಿಸುವವನು'** ಎಂದು ಹೇಳಿದ್ದಾರೆ. ಹಾಗೆ ಹೇಳಿರುವುದರಿಂದ ಈದಿನ ನಮಾಜ್ ಎನ್ನುವುದು ಸರಿಯಾದ ಪದ್ಧತಿಯಲ್ಲಿ ಇಲ್ಲವೆಂದು, ಅದು ಬಿದ್ದು ಹೋಗಿರುವ ನಮಾಜಾಗಿ ಇದೆಯೆಂದು, ಅದನ್ನು ಪುನಃ ಪ್ರತಿಷ್ಠಿಸಬೇಕೆಂದು, ಅದನ್ನೇ ನೆಲೆಗೊಳಿಸಿರೆಂದು ಹೇಳುವುದೆಂದು ಅರ್ಥ ಮಾಡಿಕೊಳ್ಳಬೇಕು. ಖುರಾನ್‌ನಲ್ಲಿ ಹೇಳಲ್ಪಟ್ಟಿರುವ ವಾಕ್ಯವನ್ನು ಅನುಸರಿಸಿ ನಾವು ಇಂದಿನಿಂದ ನಮಾಜನ್ನು ಪುನಃ ನೆಲೆಗೊಳಿಸುವುದಕ್ಕೆ ಪ್ರಯತ್ನಿಸೋಣ. ನಮಾಜ್ ಎಂದರೇ ಅರ್ಥವನ್ನು ಮೊದಲು ತಿಳಿದುಕೊಂಡರೇ, ನಂತರ ನಮಾಜನ್ನು ಹೇಗೆ ನೆಲೆಗೊಳಿಸಬೇಕೆಂಬ ನಿರ್ಣಯಕ್ಕೆ ಬರಬಹುದು. 'ನಮಾಜ್' ಎಂಬ ಪದದಲ್ಲಿ ಮೂರು ಶಬ್ಧಗಳು ಬೆರೆತಿರುವ ಪದವಾಗಿದೆ. ನಮಾಜನ್ನು ಬಿಡಿಸಿ ನೋಡಿದರೇ ನ, ಮ, ಜ್ ಎಂಬ ಮೂರು ಅಕ್ಷರಗಳು ಕಾಣಿಸುತ್ತಿವೆ. ಅದರಲ್ಲಿರುವ ಒಂದೊಂದು ಅಕ್ಷರಕ್ಕು ಒಂದೊಂದು ಅರ್ಥವಿದೆ. **'ನ'** ಎಂದರೇ ಬೇಡ ಎಂದೂ, **'ಮ'** ಎಂದರೇ ನನಗೆ ಎಂದೂ, **'ಜ್'** ಎಂದರೇ ಜನ್ಮಗಳೆಂದೂ ಅರ್ಥ. ಎಲ್ಲಾ ಕೂಡಿಸಿ ನೋಡಿದರೇ **'ನನಗೆ ಜನ್ಮಗಳು ಬೇಡವೆಂದು'** ಅರ್ಥವಿದೆ.

'ನನಗೆ ಜನ್ಮಗಳು ಬೇಡ' ಎಂಬ ಭಾವನೆಯಿಂದ ಯಾರೂ ಪ್ರಾರ್ಥನೆ ಮಾಡುತ್ತಿಲ್ಲ. ಜನ್ಮಗಳು ಬೇಡ ಎಂದರೇ ಪರೋಕ್ಷವಾಗಿ ಈ ಲೋಕವು ಬೇಡ ಪರಲೋಕವಾದ ಮೋಕ್ಷ ಬೇಕೆಂದು ಅರ್ಥ. ಒಂದು ಹಿಂದೂಮತದಲ್ಲಿ ಹೊರತು ಉಳಿದ ಮತಗಳಲ್ಲಿ 'ಜನ್ಮಗಳಿಲ್ಲ' ಎನ್ನುವ ಊಹಾಪೋಹದಲ್ಲೇ ಇದ್ದಾರೆ. ಮೊದಲೇ ಆ ವಿಧವಾಗಿ ಇರುವುದರಿಂದ ಯಾರೂ ಪ್ರಾರ್ಥನೆಯಲ್ಲಿ 'ಜನ್ಮಗಳು ಬೇಡ' ಎನ್ನುವ ಉದ್ದೇಶ ಹೊಂದಿಲ್ಲ. ನಮಾಜ್ ವಿಷಯವು ಸಂಪೂರ್ಣವಾಗಿ ತಿಳಿಯಬೇಕೆಂದರೇ ನಮ್ಮ ರಚನೆಗಳಲ್ಲಿನ **"ಒರೆಗಲ್ಲು"** ಗ್ರಂಥವನ್ನು ಓದಿರಿ. ಆಗ 'ನಮಾಜನ್ನು ನೆಲೆಗೊಳಿಸಿರಿ' ಎಂಬ ಮಾತಿಗೆ ಪೂರ್ತಿಯಾಗಿ ವಿವರ ತಿಳಿಯುತ್ತದೆ. ನಮಾಜ್‌ನಲ್ಲಿ (ಪ್ರಾರ್ಥನೆಯಲ್ಲಿ) ದೇವರ ಭಾವನೆ ಬೇರೆಯಾಗಿರುವಾಗ, ಮನುಷ್ಯರು ಇನ್ನೊಂದು ವಿಧಾನದಲ್ಲಿ ಪ್ರಾರ್ಥನೆ ಮಾಡುತ್ತ, ಅದೇ ನಿಜವಾದ ಪ್ರಾರ್ಥನೆ ಎಂದುಕೊಳ್ಳುವುದು ಒಳ್ಳೆಯದಲ್ಲ. ಮನುಷ್ಯರು

ಮಾಡುವ ಪ್ರಾರ್ಥನೆ ಎಲ್ಲಾ ಮತಗಳಲ್ಲಿಯು ಸರಿಯಾಗಿ ಇಲ್ಲದಿರುವುದರಿಂದ, ಖುರಾನ್ ಗ್ರಂಥದಲ್ಲಿ ಮೂರು ಪ್ರಥಮ ವಾಕ್ಯಗಳಲ್ಲಿ ದೇವರು ನಮಾಜನ್ನು ಕುರಿತು ಹೇಳುತ್ತಾ, ಯಾರು ನಮಾಜನ್ನು ಸ್ಥಾಪಿಸುತ್ತಾನೋ ಅವನು ತನ್ನ ಮಾರ್ಗದಲ್ಲಿ ಇರುವವನಾಗಿ ಗುರುತಿಸಲ್ಪಡುವನೆಂದು ತಿಳಿಸಿದ್ದಾನೆ. ಅಷ್ಟೆ ಅಲ್ಲದೇ ಎರಡನೆಯ ವಾಕ್ಯದಲ್ಲಿ ಮತ್ತೊಂದು ಮಾತು ಕೂಡಾ ಹೇಳಿದ್ದಾನೆ.

ನಮಾಜನ್ನು ಕುರಿತು ಇನ್ನೂ ಆಳವಾಗಿ ಆಲೋಚಿಸಿದರೆ ಈ ವಿಧವಾಗಿ ತಿಳಿಯುತ್ತದೆ. ಕೆಲವು ಶಬ್ದಗಳು ಸೇರಿದರೇ ಮಾತಾಗುತ್ತದೆ. ಒಂದೇ ಶಬ್ಧ ಮಾತಲ್ಲ, ಅದರಲ್ಲಿ ಅರ್ಥವಿರುವುದಿಲ್ಲ. ಒಂದು ಶಬ್ದವನ್ನು ಒಂದು ಗುರುತಾಗಿ ಹೇಳಬಹುದೇ ಹೊರತು, ಅರ್ಥದಿಂದ ಕೂಡಿಕೊಂಡಿರುವ ಮಾತಾಗಿ ಹೇಳಲಾರೆವು. ಆಯತ್ ಎಂದರೇ ಒಂದು ಶಬ್ಧವಾಗಬಹುದು, ಅಥವಾ ಒಂದು ಮಾತಾಗಬಹುದು. ಅಲ್ಲಾಹ್ (ದೇವರು) ಪ್ರತಿ ಮನುಷ್ಯನ ಶರೀರದಲ್ಲಿ ಏಳು ನಾಡಿಕೇಂದ್ರಗಳನ್ನು ಕೊಟ್ಟಿದ್ದಾನೆ. ಪ್ರಾಣಿಗಳ ಶರೀರದಲ್ಲಿಯೂ ಏಳು ನಾಡಿಕೇಂದ್ರಗಳಿವೆ. ಮನುಷ್ಯನ ಶರೀರದಲ್ಲಿನ ಪ್ರತಿ ನಾಡೀಕೇಂದ್ರದಿಂದ ಒಂದು ಶಬ್ಧ ಹೊರಡುತ್ತಿದೆ. ಒಂದು ನಾಡೀ ಕೇಂದ್ರದ ನಂತರ ಮತ್ತೊಂದು ಕೇಂದ್ರದಿಂದ ಶಬ್ಧ ಹೊರಡುವುದು. ಹೀಗೆ ಒಂದು ಕೇಂದ್ರದ ನಂತರ ಮತ್ತೊಂದು ಕೇಂದ್ರವಾಗಿ, ಏಳು ನಾಡಿಕೇಂದ್ರಗಳಿಂದ ಶಬ್ಧಗಳು ಹೊರಡುತ್ತವೆ. ಏಳು ನಾಡೀಕೇಂದ್ರ ಗಳಲ್ಲಿಯೂ ಹೊರಡುವ ಶಬ್ಧಗಳು ಒಂದೇ ಆದರೂ ಒಂದರ ನಂತರ ಮತ್ತೊಂದು ಹೊರಡುತ್ತಿವೆ. ಇದು ಶರೀರದಲ್ಲಿ ಎಡಬಿಡದೆ ನಡೆಯುತ್ತಿದೆ. ನಾಡೀಕೇಂದ್ರಗಳಿಂದ ಹೊರಡುತ್ತಿರುವ ಶಬ್ಧಗಳು ಮೂಗಿನ ಮುಖಂತರ ಹೊರಬೀಳುತ್ತಿವೆ. ಇನ್ನೂ ವಿವರವಾಗಿ ತಿಳಿದುಕೊಂಡರೇ ನಾಡೀಕೇಂದ್ರದಿಂದ ಒಂದು ಚೈತನ್ಯವು ಹೊರಟು ಶ್ವಾಸಕೋಶಗಳನ್ನು ಸೇರಿ ಶ್ವಾಸಕೋಶಗಳನ್ನು ಮುದುಡಿಕೊಳ್ಳುವಂತೆ ತೆರೆದುಕೊಳ್ಳುವಂತೆ ಮಾಡುತ್ತಿದೆ. ಆಗ ಶ್ವಾಸಕೋಶಗಳಲ್ಲಿನ ಗಾಳಿ ಹೊರಟು ಮೂಗಿನ ಮೂಲಕ ಹೊರಗೆ ಹೋಗುತ್ತಿದೆ. ಗಾಳಿ ಹೊರಗೆ ಹೋಗುವಾಗ ಚಿಕ್ಕ ಶಬ್ಧ ಏರ್ಪಡುತ್ತಿದೆ. ಹಾಗೆಯೇ ಗಾಳಿ ಮೂಗಿನ ಮೂಲಕ

ಒಳಗೆ ಬರುವಾಗ ಕೂಡಾ ಶಬ್ಧ ಏರ್ಪಡುತ್ತಿದೆ. ಅದನ್ನೇ 'ಶ್ವಾಸ' ಎನ್ನುತ್ತಿದ್ದೇವೆ. ಆಲಿಸುವುದು ಶಬ್ಧಗಳಾಗಿರುವುದರಿಂದ ಇವುಗಳಿಗೆ ಅರ್ಥವಿಲ್ಲ. ಈ ಶಬ್ಧಗಳು ಶಕ್ತಿಗೆ (ಚೈತನ್ಯಕ್ಕೆ) ಗುರುತಾಗಿ ಇವೆ.

ನಾಡೀ ಕೇಂದ್ರಗಳಲ್ಲಿ ಕೆಳಗಿನಿಂದ ಮೊದಲ ನಾಡೀಕೇಂದ್ರವು ತನ್ನ ಚೈತನ್ಯದ ಮೂಲಕ 600 ಶ್ವಾಸಗಳನ್ನು ನಡೆಸುತ್ತಿದೆ. ಅದರ ನಂತರ ಇರುವ ಎರಡನೆಯ ನಾಡೀ ಕೇಂದ್ರವು ಕೂಡಲೇ ಶ್ವಾಸಕೋಶಗಳನ್ನು ಕದಲಿಸುತ್ತಾ 6000 ಶ್ವಾಸಗಳು ಆಡುವವರೆಗು ಶ್ವಾಸಕೋಶಗಳಿಗೆ ಚೈತನ್ಯವನ್ನು ಉಂಟುಮಾಡುತ್ತದೆ. ಹೀಗೆ ಎರಡನೆಯ ನಾಡೀಕೇಂದ್ರವು 6000 ಶ್ವಾಸಗಳು ಆಡುವವರೆಗು ಚೈತನ್ಯವನ್ನು ಕೊಟ್ಟ ನಂತರ ಕೂಡಲೇ ಮೂರನೆಯ ನಾಡೀಕೇಂದ್ರವು ಅದೇ ಕೆಲಸವನ್ನೇ ಮಾಡುತ್ತಿದೆ. ಮೂರನೆಯ ಕೇಂದ್ರವು ಕೂಡಾ 6000 ಶ್ವಾಸಗಳನ್ನು ನಡೆಸುತ್ತಿದೆ. ಅದರ ನಂತರ ನಾಲ್ಕನೆಯ ಕೇಂದ್ರವು ಕೂಡಾ 6000 ಶ್ವಾಸಗಳು ನಡೆಸುತ್ತಿದೆ. ಅದರ ನಂತರ ಐದನೆಯ ನಾಡೀಕೇಂದ್ರವು 1000 ಶ್ವಾಸಗಳನ್ನು ಮಾತ್ರವೇ ನಡೆಸುತ್ತಿದೆ. ಅದು ಮುಗಿದುಹೋದ ಕೂಡಲೇ ಆರನೆಯ ಕೇಂದ್ರ ತನ್ನ ಚೈತನ್ಯದಿಂದ 1000 ಶ್ವಾಸಗಳನ್ನು ನಡೆಸುತ್ತಿದೆ. ಕೊನೆಯದಾಗಿ ಏಳನೆಯ ನಾಡೀ ಕೇಂದ್ರವು ಕೂಡಾ ಕೆಳಗಿನ ನಾಡೀಕೇಂದ್ರದ ಕೆಲಸ ಮುಗಿದುಹೋದ ಕೂಡಲೇ ತನ್ನ ಕೆಲಸವನ್ನು ಪ್ರಾರಂಭಿಸಿ 1000 ಶ್ವಾಸಗಳು ನಡೆಸುತ್ತಿದೆ. ಇಲ್ಲಿಗೆ ಏಳುನಾಡೀಕೇಂದ್ರಗಳ ಕೆಲಸ ಒಂದುಬಾರಿ ಮುಗಿದು ಹೋಗಿದೆ. ಅದರಿಂದ ಶ್ವಾಸಗಳು ಏಳು  ನಾಡೀಕೇಂದ್ರಗಳಿಗೆ ಒಟ್ಟು 21,600 ಶ್ವಾಸಗಳು ನಡೆದಿವೆ. ಈ ವಿಧವಾಗಿ ಮೇಲಿರುವ ಏಳನೆಯ ನಾಡೀಕೇಂದ್ರದ ಕೆಲಸ ಮುಗಿದ ಕೂಡಲೇ ಪುನಃ ಕೆಳಗಿನ ಮೊದಲ ನಾಡೀಕೇಂದ್ರವು ಶ್ವಾಸಗಳು ಎಳೆಯಲು ಶುರುಮಾಡುತ್ತದೆ. ಹೀಗೆ ಒಂದರ ನಂತರ ಮತ್ತೊಂದು ಎಡಬಿಡದೆ ಪುನರಾವೃತ್ತವಾಗುತ್ತಾ ಶ್ವಾಸಗಳನ್ನು ಮನುಷ್ಯ ಸಾಯುವವರೆಗು ನಡೆಸುತ್ತಿವೆ. ಇದೇ ವಿಷಯವನ್ನೇ ಅಂತಿಮ ದೈವಗ್ರಂಥ ಖುರಾನ್‌ನಲ್ಲಿ 15ನೇ ಸೂರಾ 87ನೇ ಆಯತ್‌ಗಳಲ್ಲಿ ಈ ವಿಧವಾಗಿ ಹೇಳಿದ್ದಾರೆ ನೋಡಿರಿ.

**(15–87) “ನಾವು ನಿನಗೆ ಏಳು ಆಯತ್‌ಗಳನ್ನು ಕೊಟ್ಟಿದ್ದೇವೆ. ಅವು ಪದೇಪದೇ ಪುನರಾವೃತ್ತವಾಗುತ್ತಿರುತ್ತವೆ. ಇನ್ನೂ ಮಹೋನ್ನತವಾದ ಖುರಾನ್‌ನ್ನು ನಿನಗೆ ಪ್ರಸಾದಿಸಿದ್ದೇವೆ.”**

ಈ ವಾಕ್ಯದಲ್ಲಿ ಹೇಳಿರುವ ವಿಧಾನದ ಪ್ರಕಾರ “ಪದೇಪದೇ ಪುನರಾವೃತ್ತವಾಗುವ ಆಯತ್‌ಗಳಿವೆ” ಎಂದಿದ್ದಾನೆ. ಒಂದುವೇಳೆ ತಪ್ಪಾಗಿ ಏಳು ಆಯತ್‌ಗಳನ್ನು ಖುರಾನ್ ಗ್ರಂಥದಲ್ಲಿ ಹೇಳಿರುವ ವಾಕ್ಯಗಳಾಗಿ ಹೋಲಿಸಿಕೊಳ್ಳುತ್ತಾರೋ ಎಂದು ವಾಕ್ಯದ ಕೊನೆಯಲ್ಲಿ “ಇನ್ನೂ ನಿಮಗೆ ಮಹೋನ್ನತವಾದ ಖುರಾನ್‌ನ್ನು ಕೊಟ್ಟಿದ್ದೇವೆ” ಎಂದು ಹೇಳಿರುವುದಾಗಿದೆ. ಇದರ ಪ್ರಕಾರ ಖುರಾನ್ ಬೇರೆ, ಏಳು ಆಯತ್‌ಗಳು ಬೇರೆಯೆಂದು ತಿಳಿಯುತ್ತಿದೆ. ಏಳು ಆಯತ್‌ಗಳನ್ನು ಖುರಾನ್ ಗ್ರಂಥದೊಳಗೆ ಬೆರೆಸದೆ ಅವಲ್ಲದೆ ಇನ್ನೂ ಖುರಾನ್ ಗ್ರಂಥವನ್ನು ಕೊಟ್ಟಿದ್ದೇನೆಂದು ಹೇಳಿದ್ದಾರೆ. ಶರೀರ ಅಂತರಂಗದಲ್ಲಿ ಆತ್ಮ ಚೈತನ್ಯ ಶಕ್ತಿಯನ್ನು ಏಳು ನಾಡೀಕೇಂದ್ರಗಳಲ್ಲಿ ಜೋಡಿಸಿ ಕೊಟ್ಟಿರುವ ದೇವರು ಅವಲ್ಲದೇ ಪ್ರತ್ಯೇಕವಾಗಿ ಬಾಹ್ಯ ರಂಗದಲ್ಲಿ ಖುರಾನ್ ಗ್ರಂಥವನ್ನು ಕೊಡುವುದು ನಡೆದಿದೆ. ಆದ್ದರಿಂದ ತಪ್ಪಾಗಿ ಕೂಡಾ ಈ ಏಳು ಆಯತ್‌ಗಳನ್ನು ಖುರಾನ್‌ನಲ್ಲಿ ಬೆರೆಸಬಾರದು. ಶರೀರದಲ್ಲಿ ನಾಡೀ ಕೇಂದ್ರ ರೂಪದಲ್ಲಿ ಕೊಟ್ಟಿರುವ ಏಳು ಶಬ್ಧಗಳ ಚೈತನ್ಯಗಳು ಒಂದರ ನಂತರ ಮತ್ತೊಂದು ಮನುಷ್ಯ ಹುಟ್ಟಿದಾಗಿನಿಂದ ಸಾಯುವವರೆಗು ತಿರುಗಿತಿರುಗಿ ಬರುತ್ತಿರುತ್ತವೆ. ನಾಡೀಕೇಂದ್ರಗಳು ಏಳೇ ಇರುವುದರಿಂದ ಏಳು ಆಯತ್‌ಗಳೆಂದು ಹೇಳುವು ದಾಗಿದೆ. ಶರೀರ ಅಂತರ್ಗತ ಆಯತ್‌ನ್ನು ಹೇಳಿದ್ದರೇ ಮನುಷ್ಯ ಹೊರಗೆ ಗ್ರಂಥದಲ್ಲಿನ ಮಾತುಗಳೆಂದು ಅಂದುಕೊಳ್ಳುವುದು ನಡೆಯುತ್ತಿದೆ. ಈ ವಿಧವಾಗಿ ಮನುಷ್ಯ ಅಜ್ಞಾನದಿಂದ ಒಳಗೆ ಹೇಳಿರುವವುಗಳನ್ನು ಹೊರಗೆ ಅರ್ಥ ಮಾಡಿಕೊಳ್ಳುವುದರಿಂದ ದೈವಜ್ಞಾನ ತಿಳಿಯದೇ ಹೋಗಿದೆ.

ಖುರಾನ್ ಗ್ರಂಥದಲ್ಲಿ ಸ್ಥೂಲವಾದ ವಾಕ್ಯಗಳು ಕೆಲವು, ಸೂಕ್ಷ್ಮವಾದ ವಾಕ್ಯಗಳು ಎಷ್ಟೋ ಇವೆ. ಖುರಾನ್ ಗ್ರಂಥದಲ್ಲಿ (15–87) ಆಯತ್‌ಗಳಲ್ಲಿ

ಹೇಳಿರುವ ಎರಡು ವಾಕ್ಯಗಳಲ್ಲಿ ಒಂದು ಸೂಕ್ಷ್ಮ ಅರ್ಥವಿರುವುದು, ಎರಡನೆಯದು ಸ್ಥೂಲ ಅರ್ಥದಿಂದ ಕೂಡಿಕೊಂಡಿರುವುದಾಗಿದೆ. ಮೊದಲ ವಾಕ್ಯದಲ್ಲಿ "ಏಳು ಆಯತ್‌ಗಳು ಕೊಟ್ಟಿದ್ದೇವೆ" ಎಂದು ಇದೆ. ಮನುಷ್ಯನಿಗೆ ಏಳು ಆಯತ್‌ಗಳು ಕೊಟ್ಟಿರುವುದು ವಾಸ್ತವವೇ ಆದರೂ ಅವು ಶರೀರದೊಳಗೆ ಕೊಟ್ಟಿರುವವೆಂದು, ಹೊರಗಿನವಲ್ಲ ಎಂದು ಯಾರೂ ಅಂದುಕೊಳ್ಳುತ್ತಿಲ್ಲ. "ಏಳು ಆಯತ್‌ಗಳು ಪದೇ ಪದೇ ಪುನರಾವೃತ್ತವಾಗುತ್ತಿರುತ್ತವೆ" ಎಂದು ಹೇಳಿದ್ದಾರೆ. ಅದನ್ನು ಓದಿದವರು ಸರಿಯಾದ ಭಾವನೆಯಿಂದ ಅರ್ಥಮಾಡಿಕೊಳ್ಳದೇ ಆ ಏಳು ಆಯತ್‌ಗಳನ್ನು ಮಾತುಮಾತಿಗು, ಇಲ್ಲವೇ ಮತ್ತೆಮತ್ತೇ ಓದಬೇಕೆಂದು ಕೊಳ್ಳುತ್ತಿದ್ದಾರೆ. ಹಾಗೆ ಒದಬೇಕಾಗಿರುವ ಏಳು ಆಯತ್‌ಗಳು ಯಾವವು ಎಂದು ಕೇಳಿದರೇ ಅವೇ ಅಲ್‌ಫಾತಿಹಾ ಎಂಬ ಮೊದಲ ಸೂರಾದಲ್ಲಿನ ಏಳು ವಾಕ್ಯಗಳೆಂದು ಹೇಳುತ್ತಿದ್ದಾರೆ. **"ನಿಮಗೆ ಏಳು ಆಯತ್‌ಗಳನ್ನು ಕೊಟ್ಟಿದ್ದೇನೆ. ಇನ್ನೂ ಖುರಾನ್ ಗ್ರಂಥವನ್ನು ಕೊಟ್ಟಿದ್ದೇನೆ"** ಎಂದಾಗ 'ಏಳು ಆಯತ್‌ಗಳು ಬೇರೆ, ಖುರಾನ್ ಗ್ರಂಥವು ಬೇರೆ' ಎಂದು ಅರ್ಥವಾಗುತ್ತಿದೆ. ಆದರೇ ಖುರಾನ್ ಗ್ರಂಥದೊಳಗಿನವೇ ಏಳು ಆಯತ್‌ಗಳೆಂದು ಹೇಳಿಕೊಳ್ಳುವುದು ದೊಡ್ಡ ತಪ್ಪು. 'ಏಳು ಆಯತ್‌ಗಳು ಬೇರೆ, ಖುರಾನ್ ಗ್ರಂಥವು ಬೇರೆ' ಎನ್ನುವುದಕ್ಕೆ ಸಾಕ್ಷ್ಯವಾಗಿ ಏಳು ಆಯತ್‌ಗಳು ಪದೇಪದೇ ಪುನರಾವೃತ್ತವಾಗುತ್ತಿವೆ ಎಂದು ಹೇಳುವುದರಿಂದ ಅದರ ಅರ್ಥದ ಪ್ರಕಾರ ಏಳು ಆಯತ್‌ಗಳು ಮನುಷ್ಯರ ಪ್ರಮೇಯವಿಲ್ಲದೇ ಮತ್ತೆಮತ್ತೇ ಪುನಃ ಹುಟ್ಟುತ್ತಿವೆ. ಮನುಷ್ಯರು ಮಾತುಗಳ ರೂಪದಲ್ಲಿ ಬರೆದುಕೊಂಡಿರುವ ಏಳು ಆಯತ್‌ಗಳು ಮನುಷ್ಯ ಓದಿದರೇ ಹೊರತು ಅವು ಹೊರಗೆ ತಿಳಿಯುವುದಿಲ್ಲ. ಮನುಷ್ಯ ಪುನಃಪುನಃ ಓದಿದರೇ ಹೊರತು ಅವು ಪುನರಾವೃತ್ತವಾಗುವುದಿಲ್ಲ. ಆದ್ದರಿಂದ ಮನುಷ್ಯರು ಬರೆದುಕೊಂಡಿರುವ ಮಾತುಗಳು ಹೊರತು ಮನುಷ್ಯರು ಓದದ, ಬರೆಯದ ಏಳು ಆಯತ್‌ಗಳನ್ನು ದೇವರು ಮುಂಚಿತವಾಗಿ ಮನುಷ್ಯರು ಹುಟ್ಟಿದಾಗಲೇ ಅವರ ಶರೀರದಲ್ಲಿ ಇರುವಂತೆ ಕೊಟ್ಟಿದ್ದಾನೆ. ನಂತರ ಕಾಲದಲ್ಲಿ ಖುರಾನ್ ಗ್ರಂಥವನ್ನು ಬಾಹ್ಯವಾಗಿ ಕೊಟ್ಟು ಖುರಾನ್‌ನಲ್ಲಿನ ಜ್ಞಾನದಿಂದ ಮನುಷ್ಯ ಬರೆಯದ, ಓದದ

ಮಾತುಮಾತಿಗು ಅವಷ್ಟಕ್ಕೆಅವೇ ಪುನರಾವೃತ್ತವಾಗುವ ಏಳು ಶಬ್ಧಗಳನ್ನು (ಆಯತ್‌ಗಳನ್ನು) ತಿಳಿದುಕೊ ಎಂದಿದ್ದಾನೆ. ಏಳು ಆಯತ್‌ಗಳಿಗೆ ಸಂಬಂಧಿಸಿದ ವಿಷಯವನ್ನು ಭಾಷೆಯಲ್ಲಿ ಹೇಳಿದ್ದರೂ ಅದು ಭಾವನೆಯಲ್ಲಿ ಮನುಷ್ಯರಿಗೆ ಸೇರಲಿಲ್ಲ. ಆದ್ದರಿಂದ ಅಲ್ಲಿ (15–87) ವಾಕ್ಯದಲ್ಲಿ ತಿಳಿಯಬೇಕಾದ ಜ್ಞಾನವನ್ನು ತಿಳಿಯಲಾರದೆ ಹೋಗಿದ್ದಾರೆ. ಇದನ್ನು ಅನುಸರಿಸಿ ನೋಡಿದಾಗ ಭಾಷೆಗಿಂತಲೂ ಭಾವನೆ ಮುಖ್ಯವೆಂದು ತಿಳಿಯುತ್ತಿದೆ.

**'ನಮಾಜ್'** ಎಂದರೇ **ನನಗೆ ಜನ್ಮವಿಲ್ಲದೇ ಹೋಗಿ ಮೋಕ್ಷವನ್ನು ಎಂದರೇ ಪರಲೋಕವನ್ನು ಹೊಂದಬೇಕೆಂದು ಅರ್ಥ**. ದೇವರಲ್ಲಿ ಐಕ್ಯವಾಗಿದ್ದು, ಪುನಃ ಹುಟ್ಟದೇಹೋಗುವುದನ್ನು ಕೋರಿ ಮಾಡುವುದು ನಮಾಜ್ ಎಂದು ತಿಳಿಯುತ್ತಿದೆ. ನಮಾಜ್‌ಗಾಗಿ ಸೂಕ್ಷ್ಮವಾಗಿರುವ ಏಳು ಆಯತ್‌ಗಳ ಮೇಲೆ ಗಮನವಿಡಬೇಕೆಂದು ಹೇಳಬೇಕು. ಶರೀರದಲ್ಲಿನ ಏಳು ಆಯತ್‌ಗಳ ಶಬ್ಧಗಳು ಹುಟ್ಟುವುದಕ್ಕೆ ಕಾರಣವಾದ ಏಳು ನಾಡೀಕೇಂದ್ರಗಳಲ್ಲಿ ಶಕ್ತಿಯಾಗಿ, ಅಥವಾ ಚೈತನ್ಯವಾಗಿರುವ **ಆತ್ಮದ** ಮೇಲೆ ಗಮನವಿಡುವುದು ನಿಜವಾದ ನಮಾಜ್ ಆಗುವುದು. ಮನುಷ್ಯರು ಯಾರೂ ಆತ್ಮದ ಮೇಲೆ ಧ್ಯಾಸ ಇಡುತ್ತಿಲ್ಲ. ಬೋಧಕರು ಸಹಿತ ಆತ್ಮವನ್ನು ಕುರಿತು ಬೋಧಿಸುತ್ತಿಲ್ಲ. ಸೂಕ್ಷ್ಮವಾದ ಆತ್ಮ ವಿಧಾನವು (ಆತ್ಮ ಜ್ಞಾನ) ಮನುಷ್ಯರಿಗೆ ತಿಳಿದಿಲ್ಲ. ಇದೇ ವಿಷಯವನ್ನೇ ಅಂತಿಮ ದೈವಗ್ರಂಥದಲ್ಲಿ ಸೂರಾ 17, ಆಯತ್ 85ರಲ್ಲಿ ಹೀಗಿದೆ ನೋಡಿರಿ.

(17-85) **ಅವರು ಆತ್ಮವನ್ನು ಕುರಿತು ನಿನ್ನನ್ನು ಪ್ರಶ್ನಿಸುತ್ತಿದ್ದಾರೆ. 'ಆತ್ಮ ನನ್ನ ಪ್ರಭುವಿನ ಆಜ್ಞೆಯೊಂದಿಗೆ ಸಂಬಂಧಪಟ್ಟಿದೆ. ನಿಮಗೆ ಕೊಡಲಾದ ಜ್ಞಾನವು ಬಹು ಸ್ವಲ್ಪ' ಎಂದು ಅವರಿಗೆ ಹೇಳು.**

(ಇದನ್ನು ಕುರಿತು "ಅಂತಿಮ ದೈವಗ್ರಂಥ ಖುರಾನ್" ನಲ್ಲಿ ಈ ವಿಧವಾಗಿ ವಿವರವನ್ನು ಬರೆದಿದ್ದಾರೆ ನೋಡಿರಿ.)

**"ಆತ್ಮ ಎಷ್ಟೋ ಸೂಕ್ಷ್ಮವಾದುದು, ಕಣ್ಣಿಗೆ ಕಾಣದಿರುವುದು, ಆದರೇ ಪ್ರತಿ ಪ್ರಾಣಿಗೆ ಅದೇ ಜೀವನಾಧಾರ. ಅದು ಹೇಗಿರುತ್ತದೆ? ಅದರ ವಾಸ್ತವಿಕತೆ**

**ಏನು? ಎಂಬ ವಿಷಯ ಯಾರಿಗೂ ತಿಳಿದಿಲ್ಲ. ಇದನ್ನು ಕುರಿತು ಯೂದರು ಕೂಡಾ ಒಂದುಬಾರಿ ಮುಹಮ್ಮದ್ ಪ್ರವಕ್ತನನ್ನು ಪ್ರಶ್ನಿಸಿದ್ದಾರೆ. ಆಗ ಈ ಆಯತ್ ಅವತರಿಸಿದೆ. ಈ ಆಯತ್ ಭಾವನೆಯೇನೆಂದರೇ, ನಿಮಗಿರುವ ಜ್ಞಾನವನ್ನು ದೈವಜ್ಞಾನದೊಂದಿಗೆ ಹೋಲಿಸಿದಂತಾದರೇ ಬಹಳ ಸ್ವಲ್ಪವೇ. ನೀವೇನೋ ಆತ್ಮನನ್ನು ಕುರಿತು ಪ್ರಶ್ನಿಸುತ್ತಿದ್ದೀರಿ. ಆತ್ಮನನ್ನು ಕುರಿತಾದ ಪರಿಜ್ಞಾನವನ್ನು ದೇವರು ತನ್ನ ಸಂದೇಶಹರರಿಗೇ ತಿಳಿಸಲಿಲ್ಲ. ಆದರೇ ಇದು ನನ್ನ ಪ್ರಭುವಿನ ಆಜ್ಞೆಗೆ ಒಳಗಾಗಿರುವ ಅಂಶವೆಂದು ಮಾತ್ರ ತಿಳಿದುಕೊಳ್ಳಿ. ಆತ್ಮ ವಾಸ್ತವಿಕತೆ ಏನೋ ನನ್ನ ಪ್ರಭುವಿಗೆ (ದೇವರಿಗೆ) ಮಾತ್ರ ಗೊತ್ತು ಎಂದು ತನ್ನ ಪ್ರವಕ್ತ ಮೂಲಕ ದೇವರು ತಿಳಿಸಿದ್ದಾನೆ."** ಎಂದು ಮುಸ್ಲಿಮ್ ಹಿರಿಯರು ಕೆಲವರು ಅವರ ಅಭಿಪ್ರಾಯವನ್ನು ತಿಳಿಸಿದ್ದಾರೆ. ಇದನ್ನೆಲ್ಲವನ್ನು ಗಮನಿಸಿದರೇ ಆತ್ಮ ವಿಷಯವು ಬೋಧಕರಿಗೆ ಕೂಡಾ ತಿಳಿದಿಲ್ಲವೆಂದೇ ಹೇಳಬಹುದು. ಆತ್ಮ ವಿಷಯವು ದೇವರಿಗೆ ಹೊರತು ಯಾರಿಗೂ ತಿಳಿಯದಿರುವುದರಿಂದ ಆತ್ಮನನ್ನು ಕುರಿತು ಯಾರೂ ಹೇಳಲಾಗದಿದ್ದಾರೆ. ಆತ್ಮನನ್ನು ಕುರಿತು ಹೇಳುವ ಬೋಧಕರೇ ಇಲ್ಲಿಯವರೆಗು ಯಾರೂ ಬರಲಿಲ್ಲ. ಬಂದರೆ ಆತ್ಮವೇ ಬರಬೇಕು, ಹೇಳಿದರೇ ಆತ್ಮವೇ ಹೇಳಬೇಕು. ಅಷ್ಟೇ ಹೊರತು ಅದು ಸಾಧ್ಯವಾಗುವ ಕೆಲಸವಲ್ಲ. ಆತ್ಮ ದೇವರ ಆಜ್ಞೆಗೆ ಒಳಪಟ್ಟು ಕೆಲಸ ಮಾಡುತ್ತಿರುತ್ತದೆ. ಆತ್ಮ ವಿಷಯವನ್ನು ದೇವರು ಆತ್ಮದಿಂದಲೇ ಹೇಳಿಸುವನು. ದೇವರು ಏನೂ ಹೇಳುವವನಲ್ಲ. ದೇವರು ಯಾರೊಂದಿಗೆಯೂ ಮಾತನಾಡುವುದಿಲ್ಲ, ಆತನು ಯಾವ ಕೆಲಸ ಮಾಡುವುದಿಲ್ಲ.

**20) ಪ್ರಶ್ನೆ :– ನಮಾಜ್ ಎಂದರೇ ಪ್ರಾರ್ಥನೆ ಎಂದೂ ಏಳು ನಾಡೀಕೇಂದ್ರಗಳಲ್ಲಿ ಶಕ್ತಿಯಾಗಿರುವ ಆತ್ಮನನ್ನು ತಿಳಿದು ಆತ್ಮನನ್ನು ಧ್ಯಾನಿಸುವುದೇ ಪ್ರಾರ್ಥನೆ ಎಂದೂ, ಅದು ಶರೀರ ಅಂತರ್ಗತ ಆಯತ್‌ಗಳ ಮೂಲಕವೇ ಸಾಧ್ಯವೆಂದೂ ಹೇಳಿದ್ದೀರಿ. ಇದು ಸರ್ವಮಾನವರಿಗು ಅನ್ವಯಿಸುವ ವಿಧಾನವಾಗಿರುವಾಗ ಮೊದಲ ಕಾಲದಲ್ಲಿಯೇ ಕೃತಯುಗದಿಂದ ಆತ್ಮನನ್ನು ಆರಾಧಿಸದೆ, ಆತ್ಮನನ್ನು ಆರಾಧಿಸುವುದೇ ನಿಜವಾದ ಆರಾಧನೆ ಎಂದು ತಿಳಿಯದೆ ಆತ್ಮ ಆರಾಧನೆ ಶರೀರದಲ್ಲಿಯೇ**

**ಇದೆಯೆಂದು ಹೇಳದೆ ಹೊರಗೆ ಹನ್ನೊಂದು ಭಾಗಗಳಾಗಿರುವ 'ಗಾಯಿತ್ರೀ ಮಂತ್ರವನ್ನು' ಯಾಕೆ ಧ್ಯಾನಿಸಬೇಕೆಂದು ಹೇಳುತ್ತಿದ್ದೀರಿ? ಒಳಗಿನ ಆತ್ಮ ಧ್ಯಾಸವನ್ನು ಬಿಟ್ಟು ಹೊರಗಿನ ಮಂತ್ರದ ಧ್ಯಾಸವನ್ನು ಯಾಕೆ ಮಾಡಬೇಕು? ಮುಸ್ಲಿಮ್‌ರು ಶರೀರದಲ್ಲಿನ ಏಳು ಶಬ್ಧಗಳನ್ನು ಆಡಿಸುವ ಶಕ್ತಿಯನ್ನು ಅನುಸರಿಸದಂತೆ, ಹಿಂದೂಗಳು ಕೂಡಾ ಒಳಗಿನ ವಿಧಾನವನ್ನು ಬಿಟ್ಟು ಹೊರಗಿನ ಮಂತ್ರವನ್ನು ಯಾಕೆ ಆಚರಿಸುತ್ತಿದ್ದಾರೆ?**

**ಉತ್ತರ :–** ಮನುಷ್ಯರು ಮಾಯೆಯಲ್ಲಿ ಬೀಳುವುದು ಸಹಜವೇ! ದೇವರು ಮುಂಚೆಯೇ ಜ್ಞಾನ ಹೇಳಿದ್ದರೂ ಆತನ ಮಾತುಗಳ ಭಾವನೆಯನ್ನು ಗ್ರಹಿಸಿಕೊಳ್ಳಲಾರದವರು ದೇವರು ಹೇಳಿರುವುದಕ್ಕಿಂತ ಭಿನ್ನವಾಗಿ ಪ್ರವರ್ತಿಸುತ್ತಿರುತ್ತಾರೆ. ಖುರಾನ್ ಗ್ರಂಥದಲ್ಲಿ "ಇದು ಅಂತಿಮ ದೈವಗ್ರಂಥ" ಎಂದು ಹೇಳಿದ್ದರೇ ಅದೇ ಗ್ರಂಥದಲ್ಲಿ (42–51) ವಾಕ್ಯದಲ್ಲಿ ಹೇಳಿರುವ ಪ್ರಕಾರ ಬೋಧಿಸಿರುವ ಮೂರು ವಿಧಾನಗಳಲ್ಲಿ ಇದು ಕೊನೆಯ ವಿಧಾನವೆಂದು, ಗತದಲ್ಲಿ ಎರಡು ವಿಧಗಳನ್ನು ಹೇಳಿದ್ದಾನೆಂದು, ಕೊನೆಯದಾಗಿ ಉಳಿದಿರುವ ವಿಧಾನದ ಪ್ರಕಾರ ಬೋಧಿಸುವುದರಿಂದ ಇದಕ್ಕೆ ಆ ಹೆಸರು ಬಂದಿದೆಯೆಂದು ಹೇಳದೆ, "ಗತದಲ್ಲಿ ಹೇಳಿರುವ ಜ್ಞಾನಕ್ಕಿಂತಲೂ ಇದು ದೊಡ್ಡ ಜ್ಞಾನ. ಅಂದಿನ ಕಾಲಕ್ಕೆ ತಕ್ಕ ವಿಧಾನವಾಗಿ ಹೇಳಿರುವುದು, ಮೊದಲು ಬಂದಿರುವ ಜ್ಞಾನ. ಒಂದು ದ್ವಾಪರ ಯುಗದಲ್ಲಿ ಹೇಳಿರುವುದು ಅದು ಹಳೆಯ ಜ್ಞಾನ. ಅಂದಿನ ಧರ್ಮವು ಬೇರೆ, ಇಂದಿನ ಧರ್ಮವು ಬೇರೆ ಆದ್ದರಿಂದ ಭಗವದ್ಗೀತೆಗಿಂತಲೂ ಖುರಾನ್ ದೊಡ್ಡದೆಂದು, ಅಂದಿನ ಧರ್ಮಕ್ಕಿಂತಲೂ ಈಗ ಹೊಸ ಧರ್ಮ ಮನುಷ್ಯರಿಗೆ ಅವಶ್ಯಕ. ಆದ್ದರಿಂದ ಮೊದಲು ಹೇಳಿರುವ ಭಗವದ್ಗೀತೆ, ಬೈಬಲನ್ನು ಬಿಟ್ಟು ಖುರಾನ್ ಗ್ರಂಥವನ್ನೇ ಆಶ್ರಯಿಸಿರಿ. ಇಸ್ಲಾಮ್ ಮತವನ್ನು ಸ್ವೀಕರಿಸಿರಿ" ಎಂದು ಹೇಳುತ್ತಿದ್ದಾರೆ. ಅದೇ ಖುರಾನ್ ಗ್ರಂಥದಲ್ಲಿ "ಮೊದಲು ಬಂದಿರುವ ಗ್ರಂಥಗಳನ್ನು ಗೌರವಿಸುತ್ತಿದ್ದೇನೆ. ಅದರಲ್ಲಿ **ಜ್ಞಾನಜ್ಯೋತಿ, ಮಾರ್ಗದರ್ಶಕವಿದೆ** ಎಂದು ದೃಢಪಡಿಸುತ್ತಿದ್ದೇನೆ" ಎಂದು ಇದ್ದರೇ ಖುರಾನ್‌ನಲ್ಲಿ ಹೇಳಿರುವ

ದೇವರ ಮಾತಿಗೆ ವಿರುದ್ಧವಾಗಿ ಮತಮೌಢ್ಯಗಳು "ನಮ್ಮ ಗ್ರಂಥವೇ ದೊಡ್ಡದು, ನಮ್ಮ ಧರ್ಮವೇ ದೊಡ್ಡದೆಂದು" ಹೇಳುತ್ತಿದ್ದಾರೆ. **ಸೃಷ್ಠಿ ಆದಿಯಿಂದ ಎಷ್ಟು ಯುಗಗಳು ಬದಲಾದರೂ ದೇವರು ಒಬ್ಬನೇ, ದೇವರ ಧರ್ಮವು ಒಂದೇ.** ದೇವರು, ದೇವರ ಧರ್ಮ ಎಂದಿಗೂ ಬದಲಾಗುವುದಲ್ಲ. ಆದರೂ ಎಲ್ಲೂ ಇಲ್ಲದಿರುವುದನ್ನು, ಎಲ್ಲೂ ಬರೆಯದಿರುವುದನ್ನು ಹೇಳುತ್ತಾ ನಮ್ಮ ಮತವೇ ದೊಡ್ಡದು, ನಮ್ಮ ಗ್ರಂಥವೇ ದೊಡ್ಡದೆನ್ನುವುದು ದೇವರಿಗೆ ವಿರುದ್ಧವಾಗಿ ಮಾತನಾಡುವುದು ಹೊರತು ಬೇರೆಯಲ್ಲ. ಆದ್ದರಿಂದ ದೇವರಿಂದ, ದೇವದೂತರಿಂದ ಶಿಕ್ಷೆ ತಪ್ಪುವುದಿಲ್ಲ.

ಈ ವಿಧವಾಗಿ ಮನುಷ್ಯ ಮಾಯೆ ಪ್ರಭಾವದಿಂದ ಅಜ್ಞಾನದಲ್ಲಿ ಮುಳುಗಿಹೋಗಿ ಗ್ರಂಥದಲ್ಲಿ ಬರೆದಿರುವುದಕ್ಕೆ ವಿರುದ್ಧವಾಗಿ ಮಾತನಾಡುತ್ತಾ 'ಅಂತಿಮ ಗ್ರಂಥ' ಎಂದು ಹೇಳಿರುವ ಭಾವನೆಯನ್ನು ಗ್ರಹಿಸಿಕೊಳ್ಳಲಾರದೆ ಹೋಗಿದ್ದಾರೆ. ಕೆಲವರು ಅಂತಿಮ ಗ್ರಂಥವೊಂದರ ಅರ್ಥವನ್ನು ತಿಳಿದರೂ ತಮ್ಮ ಮತಕ್ಕಾಗಿ ಅದನ್ನು ವಕ್ರಮಾರ್ಗದಲ್ಲಿ ಹೇಳುತ್ತಾ ತಮ್ಮ ಗ್ರಂಥವೇ ದೊಡ್ಡದು, ತಮ್ಮ ಜ್ಞಾನವೇ ದೊಡ್ಡದೆಂದು ಹೇಳುತ್ತಿದ್ದಾರೆ. ಈ ವಿಧವಾಗಿ ಮನುಷ್ಯರು ಮತದಕಡೆಗೆ ಹೋಗಿ ದೇವರ ಮಾತನ್ನು ಕೂಡಾ ಗೌರವಿಸುತ್ತಿಲ್ಲ. ಅದೇ ವಿಧವಾಗಿ ದೇವರು ಶರಿರದಲ್ಲಿ ಅಂತರ್ಗತವಾಗಿರುವ ಜ್ಞಾನವನ್ನು ಹೇಳಿ, ಶರೀರ ಅಂತರ್ಗತದಲ್ಲಿನ ಶಕ್ತಿಮೇಲೆಯೇ ಗಮನವನ್ನಿಟ್ಟುಕೊಳ್ಳಿ ಎಂದು ಹೇಳಿದ್ದರೇ, ಆ ಮಾತನ್ನು ಲೆಕ್ಕಿಸದೇನೋ, ಹೇಳಿರುವ ಭಾವನೆಯನ್ನು ಸರಿಯಾಗಿ ಗ್ರಹಿಸದೇನೋ ಶರೀರದೊಳಗಿನ ಧ್ಯಾಸವನ್ನಲ್ಲದೇ ಹೊರಗಿನ ಧ್ಯಾಸವನ್ನು ಬೆಳೆಸಿಕೊಳ್ಳುತ್ತಿದ್ದಾರೆ. ಹೊರಗಿನ ಮಂತ್ರಗಳನ್ನು ಜಪಿಸುತ್ತಿದ್ದಾರೆ. "ಪ್ರತಿ ಮಾತು ಮಂತ್ರವೇ, ಪ್ರತಿ ಎಲೆ ಔಷಧವೇ" ಎನ್ನುವಂತೆ ಹನ್ನೊಂದು ಮಾತುಗಳಿಂದ ಕೂಡಿರುವ ಗಾಯಿತ್ರೀ ಮಂತ್ರ'ವನ್ನು ಹಿಂದೂಗಳು, ಹೊರಗೆ ಏಳು ಮಾತುಗಳಿಂದ ಕೂಡಿರುವ 'ನಮಾಜನ್ನು' ಮುಸ್ಲಿಮ್‌ರು ಆಚರಿಸುತ್ತಿದ್ದಾರೆ. ಪದೇಪದೇ ಅವಷ್ಟಕ್ಕವೇ ಪುನರಾವೃತ್ತವಾಗಿ ಬರುವ ಏಳು ಆಯತ್‌ಗಳು

ಶರೀರದೊಳಗೆ ಇರುವಾಗ, ಅವುಗಳನ್ನೇ ಪ್ರತ್ಯೇಕಿಸಿ (15–87) ವಾಕ್ಯದಲ್ಲಿ ಹೇಳಿದ್ದರೇ ಅದನ್ನು ಸ್ವಲ್ಪವಾದರೂ ಮನುಷ್ಯ ಗುರುತಿಸುತ್ತಿಲ್ಲ. ಖುರಾನ್ ಗ್ರಂಥವನ್ನು ಓದಿದರೂ ಪಕ್ಕದಾರಿಯಲ್ಲಿ ಹೋಗುವವರನ್ನು ದೇವರು ಕ್ಷಮಿಸುವುದಿಲ್ಲ.

ಯಾವ ವಿಧವಾಗಿ ಮುಸ್ಲಿಮರು ಅಂತರ್ಗತವಾಗಿ ಹೇಳಿರುವ ಏಳು ಆಯತ್‌ಗಳನ್ನು ಬಿಟ್ಟು ಹೊರಗಿನ ಮಾತುಗಳ ರೂಪದಲ್ಲಿರುವ ಏಳು ಆಯತ್‌ಗಳನ್ನು ಓದಿ ಅದೇ ನಮಾಜ್ ಎನ್ನುತ್ತಿದ್ದಾರೋ, ಅದೇ ವಿಧವಾಗಿ ಹಿಂದೂಗಳು ಶರೀರದಲ್ಲಿ ಹೇಳಿರುವ ಗಾಯಿತ್ರಿಯನ್ನು ಹೊರಗಿನ ಮಂತ್ರವಾಗಿ ತಯಾರಿ ಮಾಡಿಕೊಂಡು ಉಚ್ಚರಿಸುತ್ತಾ (ಓದುತ್ತಾ) ಅದೇ ಪ್ರಾರ್ಥನೆ ಎನ್ನುತ್ತಿದ್ದಾರೆ. ಅದೇ ವಂದನೆ ಎಂದೂ, ಸಂಧ್ಯಾ ವಂದನೆ ಎಂದು ಹೇಳುತ್ತಿದ್ದಾರೆ. ಪೂರ್ವವು ಕೃತಯುಗದಲ್ಲಿ ಕೆಲವರು ಜ್ಞಾನಿಗಳು ಸರಿಯಾದ ಅಂತರ್ಗತ ಪ್ರಾರ್ಥನೆಯಾಗಿ ಮಾಡುವುದೇ ನಿಜವಾದ 'ಗಾಯಿತ್ರೀ'ಯಾಗಿ ಇರುತ್ತಿತ್ತು. ಗಾಯಿತ್ರೀ ಎಂದರೇ ಮೂರು ವಿಧಗಳಾಗಿದೆ ಎಂದು ಅರ್ಥ. 'ಗಾಯಿ' ಎಂದರೇ 'ಹಸು' ಎಂದು ಅರ್ಥ. ಗೋವು ಎಂದರೂ ಹಸು ಎಂದು ಅರ್ಥ. ಗೋವು ಎಂಬ ಎರಡಕ್ಷರಗಳಲ್ಲಿ 'ಗೋ' ಯಿಂದ 'ಗಾ', 'ವು' ಯಿಂದ 'ಯಿ' ಎಂದು ಹುಟ್ಟಿರುವ ಅಕ್ಷರಗಳೇ ಗಾಯಿ. ಗೋವು, ಗಾಯಿ ಎಂದು ಹೇಗೆಂದರೂ 'ಹಸು' ಎಂದು ಅರ್ಥ. ಹಸುವನ್ನು "ತಲೆ, ಬಾಲ, ಸೊಂಟ" ಎಂದು ಮೂರು ಭಾಗಗಳಾಗಿ ತೋರಿಸಿದಂತೆ ಹಸುವನ್ನು 'ಗಾಯಿತ್ರೀ' ಎಂದಿದ್ದಾರೆ. 'ಗಾಯಿ' ಎಂದರೇ ಹಸು ಆಗಿರುವಾಗ, 'ತ್ರೀ' ಎಂದರೇ ಮೂರೆಂದು ಅರ್ಥ. ಈ ಪದಗಳೆಲ್ಲಾ ವಾಸ್ತವವಾಗಿ ತೆಲುಗು ಪದಗಳೇ ಎಂದು ಮರೆಯಬಾರದು. ಹಸುವನ್ನು ಹಿಂದೂಗಳು ಪವಿತ್ರವಾದುದಾಗಿ ಹೇಳಿಕೊಳ್ಳುತ್ತಿದ್ದಾರೆ. ಆದ್ದರಿಂದ ಹೊಸ ಮನೆಯಲ್ಲಿ ಮೊದಲು ಹಸುವನ್ನು ಪ್ರವೇಶಿಸಿ ಪೂಜೆ ಮಾಡಿದರೇ ಮನೆಯಲ್ಲಿನ ದೋಷಗಳೆಲ್ಲ ಹೋಗಿ ಪವಿತ್ರತೆ ಕೈಗೂಡುವುದೆಂದು ಪ್ರಜೆಗಳ ನಂಬಿಕೆ. ಆದ್ದರಿಂದ 'ಗಾಯಿತ್ರೀ' ಎಂದರೇ 'ಪವಿತ್ರವಾದ ಮೂರು' ಎಂದು ಅರ್ಥ, ಅಥವಾ ಮೂರು ಪವಿತ್ರವಾದವುಗಳು ಎಂದು ಕೂಡಾ ಹೇಳಬಹುದು.

ಪಕ್ಕದ ಪುಟದಲ್ಲಿನ ಚಿತ್ರದಲ್ಲಿ ತೋರಿಸಿರುವ ವಿಧವಾಗಿ ಶರೀರದಲ್ಲಿರುವ ಏಳು ನಾಡೀಕೇಂದ್ರಗಳನ್ನು ಮೂರು ಭಾಗಗಳಾಗಿ ಮಾಡಿ ಕೆಳಗಿನ ಒಂದು ಭಾಗವನ್ನು ಪ್ರತ್ಯೇಕವಾಗಿ ಮಾಡಿ, ಅದರ ಮೇಲಿನ ಭಾಗ ಮೂರು ಕೇಂದ್ರಗಳನ್ನು ಒಂದು ಭಾಗವಾಗಿ, ಅದರ ಮೇಲಿನ ಭಾಗದಲ್ಲಿನ ಮೂರು ಕೇಂದ್ರಗಳನ್ನು ಒಂದು ಭಾಗವಾಗಿ ಗುರುತಿಸಿರುವಾಗ ಏಳು ನಾಡೀ ಕೇಂದ್ರಗಳು ಮೂರು ಭಾಗಗಳಾಗಿ ಹೇಳಬಹುದು. ಅದರಲ್ಲಿ ಮೊದಲನೆಯದರಲ್ಲಿ 600 ಶ್ವಾಸಗಳಿವೆ. ಉಳಿದ ಮೂರರಲ್ಲಿ ಒಂದೊಂದರಲ್ಲು 6000 ಪ್ರಕಾರ ಮೂರರಲ್ಲಿ 18,000 ಆಗುತ್ತದೆ. ನಂತರ ಮೂರು ಕೇಂದ್ರಗಳಲ್ಲಿ ಒಂದೊಂದರಲ್ಲಿ 1000 ಪ್ರಕಾರ ಶ್ವಾಸಗಳಿರುವುದರಿಂದ ಒಟ್ಟು 3000 ಆಗುತ್ತಿವೆ. ಮೂರು ಭಾಗಗಳನ್ನು ಸೇರಿಸಿ ನೋಡಿದಾಗ ಒಟ್ಟಾರೆ 21,600 ಆಗುತ್ತಿವೆ.

ಏಳು ನಾಡೀಕೇಂದ್ರಗಳ ಚೈತನ್ಯವು 21,600 ಶ್ವಾಸಗಳಾಗಿ ಹೊರಬೀಳುತ್ತಿದೆ. ಒಂದೊಂದು ಶ್ವಾಸದಲ್ಲಿ ಒಂದು ಶಬ್ಧವಿದೆ. ಆ ಶಬ್ದವು ಆತ್ಮಶಕ್ತಿಯಿಂದ ಏರ್ಪಟ್ಟಿದೆ. ಆತ್ಮ ಅಕ್ಷರವಾಗಿದೆ. ಅಕ್ಷರವಾದ ಆತ್ಮದಿಂದ ಏರ್ಪಟ್ಟಿರುವ ಒಂದು ಶಬ್ಧವನ್ನು **"ಓಂ"** ಎಂದು ಹೇಳಬಹುದು. ನಾಡೀ ಕೇಂದ್ರದಲ್ಲಿನ ಆತ್ಮಶಕ್ತಿಯಿಂದ ಮನುಷ್ಯನಿಗೆ ಶ್ವಾಸ ಆಡುತ್ತಿದೆ. ಶ್ವಾಸ ಹೊರಗೆ ಹೋಗುವಾಗ **'ಹಮ್'** ಎಂಬ ಶಬ್ದದೊಂದಿಗೆ ಹೋಗುತ್ತಿದೆ. ಹೊರಗಿನಿಂದ ಒಳಗೆ ಬರುವಾಗ **"ಸೋ"** ಶಬ್ದದೊಂದಿಗೆ ಬರುತ್ತಿದೆ. ಒಂದುಬಾರಿ ಶ್ವಾಸ ಒಳಗೆ ಹೋಗಿ, ಹೊರಗೆ ಬಂದರೇ ಒಂದು ಶ್ವಾಸ ಆಡಿದಂತೆ ಲೆಕ್ಕಿಸಲ್ಪಡುತ್ತದೆ. ಒಳಗೆ ಹೋಗುವ ಶ್ವಾಸದಲ್ಲಿ ಮೂಗಿನರಂಧ್ರಗಳ ಬಳಿ **"ಸೋ"** ಎಂಬ ಶಬ್ದವನ್ನು, ಹೊರಗೆ ಬರುವಾಗ "ಹಮ್" ಎಂಬ ಶಬ್ದವಿರುವುದರಿಂದ ಒಂದು ಶ್ವಾಸದಲ್ಲಿ ಪೂರ್ತಿ ಶಬ್ದವನ್ನು ನೋಡಿದರೇ **"ಸೋಹಮ್"** ಎಂದು ತಿಳಿಯುತ್ತಿದೆ. ಒಳಗೆ ಹೋಗುವ ಶ್ವಾಸದಲ್ಲಿರುವ ಶಬ್ದದಲ್ಲಿ 'ಸೋ' ಎಂಬ ಶಬ್ಧದ ಕೊನೆಯಲ್ಲಿ 'ಓ' ಎಂಬ ಶಬ್ದವಿದೆ. ಸ+ಓ ಎರಡು ಶಬ್ದಗಳ ಸೇರುವಿಕೆಯೇ 'ಸೋ' ಎಂಬ ಶಬ್ದ. ಆದ್ದರಿಂದ 'ಸೋ' ನಲ್ಲಿ ಕೊನೆಯ ಶಬ್ದ "ಓ" ಇದೆ. ಹೊರಗೆ ಬರುವ

ಶ್ವಾಸದಲ್ಲಿ 'ಹಮ್' ಶಬ್ದವಿದೆ ಅಲ್ಲವೇ! ಅದರಲ್ಲಿ ಕೊನೆಯಲ್ಲಿ 'ಮ್' ಇದೆ. ಸೋ, ಹಂ ಶಬ್ದಗಳಲ್ಲಿ ಅಂತ್ಯ ಶಬ್ದಗಳನ್ನು ತೆಗೆದುಕೊಂಡರೇ **"ಓಂ"** ಎನ್ನುವ ಶಬ್ದ ಹೊರಬೀಳುತ್ತಿದೆ. ಮನುಷ್ಯ ಸುಮ್ಮನಿದ್ದರೂ ಆತನಲ್ಲಿ ಆಡುವ ಶ್ವಾಸದ ಮೂಲಕ ಪ್ರತಿ ಶ್ವಾಸದಲ್ಲಿ **"ಓಂ"** ಶಬ್ದವು ಸೇರಿದೆ.

ಒಂದು ದಿನಕ್ಕೆ 21,600 ಶ್ವಾಸಗಳು ಮನುಷ್ಯನಲ್ಲಿ ಆಡುತ್ತಿವೆ. ಏಳು ನಾಡೀಕೇಂದ್ರಗಳಲ್ಲಿನ ಚೈತನ್ಯಶಕ್ತಿ (ಆತ್ಮಶಕ್ತಿ) ಒಂದು ದಿನಕ್ಕೆ 21,600 ಬಾರಿ "ಓಂ" ಎಂಬ ಶಬ್ಧವನ್ನು ಉಚ್ಛರಿಸಿದಂತಾಗುತ್ತದೆ. ಮನುಷ್ಯನ ಪ್ರಮೇಯವಿಲ್ಲದೇ ತನ್ನಷ್ಟಕ್ಕೆ ತಾನು ಶ್ವಾಸದಲ್ಲಿಯೇ "ಓಂ" ಎಂಬ ಶಬ್ದವನ್ನು ಹೇಳಿದಂತಾಗುತ್ತಿದೆ. ಏಳು ನಾಡೀಕೇಂದ್ರಗಳನ್ನು ಮೂರು ಭಾಗಗಳಾಗಿ 'ಗಾಯಿತ್ರೀ' ಎಂದು ಹೇಳುತ್ತಾ ದಿನಕ್ಕೆ 21,600 ಶ್ವಾಸಗಳು ಆಡುತ್ತಿರುವುದರಿಂದ ಆ ಶ್ವಾಸಗಳಲ್ಲಿ ದಿನಕ್ಕೆ 21,600 ಬಾರಿ "ಓಂ" ಎಂಬ ಶಬ್ದ ಮಂತ್ರವಾಗಿ ನುಡಿಯುತ್ತಿರುವುದರಿಂದ ಮನುಷ್ಯನ ಪ್ರಮೇಯವಿಲ್ಲದೇ ಮನುಷ್ಯ ಜಪಿಸದೇನೇ ನಡೆಯುವ 'ಓಂ' ಮಂತ್ರವನ್ನು **"ಅಜಪ ಗಾಯಿತ್ರೀ"** ಎಂದು ಅನ್ನುತ್ತಿದ್ದರು. 'ಅಜಪ ಗಾಯಿತ್ರೀ'ಯಾಗಿ ಇರುವ ಶ್ವಾಸದಲ್ಲಿ ಮನಸ್ಸನ್ನು ಸೇರಿಸಿ ಆತ್ಮದಲ್ಲಿ ಲಗ್ನ ಮಾಡುವುದನ್ನು ನಿಜವಾದ ಆರಾಧನೆ ಎನ್ನುತ್ತಿದ್ದರು. ಆದರೇ ಹಿಂದೂಗಳಲ್ಲಿ ಬಹಳಜನ ಜ್ಞಾನ ತಿಳಿದಿದೆ ಎಂದು ಹೇಳಿಕೊಳ್ಳುವವರೆಲ್ಲರೂ ಪೂರ್ವದಲ್ಲಿ 'ಅಜಪ ಗಾಯಿತ್ರೀ'ಯಲ್ಲಿ ಮನಸ್ಸನ್ನು ಲಗ್ನ ಮಾಡಿ ದೈವಾರಾಧನೆ, ದೈವಪ್ರಾರ್ಥನೆ, ಅಥವಾ ದೈವ ವಂದನೆ ಮಾಡುತ್ತಿದ್ದರು. ಅದುಸ್ವಲ್ಪ ಕಾಲಕ್ರಮವಾಗಿ ಬದಲಾಗಿ ಒಳಗಿನ ಗಾಯಿತ್ರೀಯನ್ನು ಬಿಟ್ಟು ಹೊರಗೆ ಹನ್ನೊಂದು ಭಾಗಗಳಾಗಿರುವ ಗಾಯಿತ್ರೀ ಮಂತ್ರವನ್ನು ಧ್ಯಾನಿಸುತ್ತಾ ಅದನ್ನೇ ನಿಜವಾದ ಪ್ರಾರ್ಥನೆ, ಅಥವಾ ಆರಾಧನೆ ಎಂದು ಅನ್ನುತ್ತಿದ್ದಾರೆ. ಪೂರ್ವವಿರುವ 'ಅಜಪ ಗಾಯಿತ್ರೀ' ವಿಷಯ ತಿಳಿದುಕೊಂಡರೇ ಈದಿನ ಮಾಡುವ ಗಾಯಿತ್ರೀ ಮಂತ್ರವನ್ನು ಶಬ್ದಗಳ (ಮಾತುಗಳ) ರೂಪವಾಗಿ ಧ್ಯಾನಿಸುವವರದ್ದು ನಿಜವಾದ ಆರಾಧನೆಯಲ್ಲ ಎಂದು ಹೇಳಬಹುದು.

ಮುಸ್ಲಿಮ್‌ರು ಮಾಡುವ ನಮಾಜನ್ನು ಕುರಿತು ಖುರಾನ್ ಗ್ರಂಥದಲ್ಲಿ (15–87) ಆಯತ್‌ನಲ್ಲಿ ಹೇಳಿದ್ದರೂ ಆ ಮಾತನ್ನು ಲೆಕ್ಕಿಸದೆ ಮಾತುಗಳಿಂದ ಕೂಡಿಕೊಂಡಿರುವ ಏಳು ಆಯತ್‌ಗಳನ್ನು ತಯಾರಿ ಮಾಡಿಕೊಂಡು, ಅವುಗಳನ್ನು ಓದುವುದೇ ಧ್ಯಾನ (ನಮಾಜ್) ಎಂದು ಹೇಳುತ್ತಿದ್ದಾರೆ. ಅದೇ ವಿಧಾನವನ್ನೇ ಹಿಂದೂಗಳು ಕೂಡಾ ಜಾರಿ ಮಾಡುತ್ತಾ ಗಾಯಿತ್ರೀ ಮಂತ್ರವನ್ನು ಜಪಿಸುತ್ತಾ ಅದೇ ಆರಾಧನೆ ಎಂದು ಹೇಳುತ್ತಿದ್ದಾರೆ. ಅಷ್ಟಕ್ಕೆ ನಿಲ್ಲದೆ ಹಿಂದೂಗಳು ಗಾಯಿತ್ರೀ ಮಂತ್ರವನ್ನು ಸಂಸ್ಕೃತ ಭಾಷೆಯಲ್ಲಿಯೇ ಓದಬೇಕೆಂದು, ಸಂಸ್ಕೃತ ಬಾರೆದೆ ಇರುವವರು ಅಜ್ಞಾನಿಗಳೆನ್ನು ವಹಾಗೆ ಹೇಳುತ್ತಿದ್ದಾರೆ. ದೈವ ಆರಾಧನೆಗೆ ಸಂಸ್ಕೃತ ಭಾಷೆಯೇ ಮುಖ್ಯವೆಂದು ಹೇಳುತ್ತಾ, ಕೆಲವರು ಕಲಿಯಬೇಕೆಂದುಕೊಂಡರೂ ಶೂದ್ರರಿಗೆ ಅಂತಹ ಅವಕಾಶವೇ ಇಲ್ಲದೇ ಮಾಡುತ್ತಾ, ಶೂದ್ರರು ಶುಚಿ ಶುಭ್ರತೆ ಇಲ್ಲದವರೆಂದೂ, ಅಂಥವರು ಸಂಸ್ಕೃತವನ್ನು ಕಲಿಯಬಾರದೆಂದು ಆಕ್ಷೇಪಣೆಗಳಿಟ್ಟಿದ್ದಾರೆ. ಹಾಗೆ ಹೇಳುತ್ತಾ ಸಂಸ್ಕೃತವನ್ನು ಅಡ್ಡವಿಟ್ಟುಕೊಂಡು ಶೂದ್ರರ ಮೇಲೆ ಆಧಿಪತ್ಯವನ್ನು ಹೊಂದಿ, ಅವರಮೇಲೆ ಅಧಿಕಾರವನ್ನು ಚಲಾಯಿಸುತ್ತಿದ್ದಾರೆ.

ಹಿಂದೂಗಳಿಗಿಂತಲೂ ಹಿಂದೆ ಕಲಿಯುಗದಲ್ಲಿ ಬಂದವರು ಮುಸ್ಲಿಮ್‌ರು. ಮೊದಲಿನಿಂದ ಹಿಂದೂಗಳಲ್ಲಿ ಕೆಲವರು ಅಗ್ರವರ್ಣದವರು ಶೇಕಡ 85ರಷ್ಟಿರುವ ಶೂದ್ರರಮೇಲೆ ಸಂಸ್ಕೃತ ಭಾಷೆಯನ್ನು ಅಡ್ಡವಿಟ್ಟುಕೊಂಡು ಅಧಿಕಾರ ಚಲಾಯಿಸುವುದನ್ನು ನೋಡಿ, ಮುಸ್ಲಿಮ್‌ರಲ್ಲಿ ಕೂಡಾ ಕೆಲವರು ಓದುಬರಹ ಬರುವವರು, ಮಾತುಗಳನ್ನು ಕಲಿತವರು ಶೇಕಡ ಹತ್ತರಷ್ಟು ಜನ ಹಿಂದೂಗಳಲ್ಲಿ ನಡೆಯುವ ದೌರ್ಜನ್ಯ ವಿಧಾನವನ್ನು ತಾವು ಕೂಡಾ ತಮ್ಮ ಮತದಲ್ಲಿ ಅವಲಂಭಿಸಿ, ಉಳಿದ ಶೇ. 90ರಷ್ಟು ಜನ ಮುಸ್ಲಿಮ್‌ರನ್ನು ತಮ್ಮ ಕೈಕೆಳಗೆ ಇಟ್ಟುಕೊಳ್ಳಬೇಕೆಂದುಕೊಂಡಿದ್ದಾರೆ. ಭಕ್ತಿ, ವಿಶ್ವಾಸಗಳಿಗೆ ಹೆಸರಾದ ಅಮಾಯಕ ಮುಸ್ಲಿಮ್‌ರನ್ನು, ಹಿರಿಯರ ಮಾತುಗಳನ್ನು ಗೌರವಿಸುವ ಮುಸ್ಲಿಮ್‌ರನ್ನು ತಮ್ಮ ಆಧಿಪತ್ಯದಲ್ಲಿ ಇಟ್ಟುಕೊಳ್ಳಬೇಕೆಂದು, ತಾವು ಹೇಳಿದಂತೆ ಅವರೆಲ್ಲರೂ ಕೇಳುವಹಾಗೆ ನಮಾಜನ್ನು ಏಳು ವಾಕ್ಯಗಳ ಸಮ್ಮೇಳನವಾಗಿ

ಮಾಡಿ, ಆ ನಮಾಜನ್ನು ಏಳು ವಾಕ್ಯಗಳನ್ನು ಅರಬ್ಬೀ ಭಾಷೆಯಲ್ಲಿಯೇ ಓದಬೇಕೆಂಬ ನಿಯಮವನ್ನು ಇಟ್ಟು, ಅರಬ್ಬೀ ಭಾಷೆ ಬಾರದವರೆಲ್ಲರನ್ನೂ ತಮ್ಮ ಮಾತು ಕೇಳುವಂತೆ ಅವರಮೇಲೆ ಆಧಿಪತ್ಯವನ್ನು ಹೊಂದಿದ್ದಾರೆ. ಅಂತಿಮ ದೈವಗ್ರಂಥವಾದ ಖುರಾನ್ ಗ್ರಂಥವನ್ನು ಕೂಡಾ ಭಾಷೆ ಬಾರದಿದ್ದರೂ ಪರವಾಗಿಲ್ಲ, ಅರಬ್ಬೀ ಭಾಷೆಯಲ್ಲಿಯೇ ಓದಬೇಕೆಂಬ ನಿಯಮವನ್ನು ಇಟ್ಟಿದ್ದಾರೆ. ಅದರಿಂದ ಅರಬ್ಬೀ ಭಾಷೆ ಬಾರದ ಉಳಿದ ದೇಶಗಳ ಮುಸ್ಲಿಮ್‌ರೆಲ್ಲರಿಗೂ ಶೇ. ಹತ್ತರಷ್ಟು ಜನ ಮಾತ್ರವೇ ಗುರುಗಳಾಗಿ, ಇಮಾಮ್‌ಗಳಾಗಿ, ಮತ ಹಿರಿಯರಾಗಿ ಚಲಾವಣೆ ಆಗುತ್ತಾ ಉಳಿದ ಶೇಕಡ 90 ರಷ್ಟು ಜನರಿಗೆ ಹಿರಿಯರಾಗಿ ಹೇಳಿಕೊಳ್ಳುತ್ತಿದ್ದಾರೆ. ಖುರಾನ್ ಅರಬ್ಬೀ ಭಾಷೆಯಲ್ಲಿರುವುದರಿಂದ ಭಾರತ ದೇಶ ಮುಸ್ಲಿಮ್‌ರಿಗೆ ಖುರಾನ್ ಜ್ಞಾನವೇ ಗೊತ್ತಿಲ್ಲ. ಖುರಾನ್ ಗ್ರಂಥದಲ್ಲಿ ದೇವರು ಹೇಳಿರುವುದನ್ನು ಇತರ ಮುಸ್ಲಿಮ್‌ರಿಗೆ ಹೇಳದೆ ತಮಗೆ ತೋಚಿರುವುದು, ತಮಗೆ ತಿಳಿದಿರುವುದು, ತಮಗೆ ಇಷ್ಟವಾದುದು ಹೇಳಿ ಜ್ಞಾನವನ್ನು ತಿಳಿಯಬೇಂದುಕೊಳ್ಳುವವರನ್ನು ಪಕ್ಕದಾರಿ ಹಿಡಿಸಿ ದೇವರ ಜ್ಞಾನ ಇದು ಎಂದು ತಿಳಿಯದೇ ಮಾಡುತ್ತಿದ್ದಾರೆ. ಯಾವ ವಿಧವಾಗಿ ಹಿಂದೂಗಳಲ್ಲಿ ಕೆಲವರು ಉಳಿದ ಹಿಂದೂಗಳಿಗೆ ಸಂಸ್ಕೃತ ಬರುವುದಿಲ್ಲವೆಂದು, ಅವರನ್ನು ಅಜ್ಞಾನಿಗಳೆಂದು ಹೇಳುತ್ತಾ ಭಾಷೆಯನ್ನು ಅಡ್ಡಇಟ್ಟುಕೊಂಡು ಪ್ರಜೆಗಳ ಮೇಲೆ ಅಧಿಕಾರವನ್ನು ಚಲಾಯಿಸಿದಹಾಗೆ, ಮುಸ್ಲಿಮ್‌ರು ಕೂಡಾ ತಮ್ಮ ಪ್ರಜೆಗಳ ಮೇಲೆ ತಮ್ಮ ದೊಡ್ಡಸ್ತಿಕೆಯನ್ನು ಚಲಾಯಿಸುವುದಕ್ಕೆ ಅರಬ್ಬೀ ಭಾಷೆಯನ್ನು ಅಡ್ಡಇಟ್ಟು ಕೊಂಡಿದ್ದಾರೆ. ನಂತರ ಗ್ರಂಥದಲ್ಲಿಲ್ಲದ ನಿಬಂಧನೆಗಳನ್ನು ಇಟ್ಟು ಕೊನೆಗೆ ಖುರಾನ್ ಜ್ಞಾನವನ್ನು ಕೂಡಾ ಅರ್ಥವಾಗದೇ ಮಾಡಿದ್ದಾರೆ.

**20) ಪ್ರಶ್ನೆ :– ದೇವರು ತನ್ನ ಜ್ಞಾನವನ್ನು ತಿಳಿದುಕೊಳ್ಳಿರೆಂದಿದ್ದಾನೆ ಆದರೇ ಹಿಂದೂಗಳಿಗೆ ಸಂಸ್ಕೃತ ಭಾಷೆಯೆಂದೂ, ಮುಸ್ಲಿಮ್‌ರಿಗೆ ಅರಬ್ಬೀ ಭಾಷೆಯೆಂದೂ ತನ್ನ ಗ್ರಂಥದಲ್ಲಿ ಎಲ್ಲೂ ಹೇಳಿಲ್ಲ ಅಲ್ಲವೇ! ಹಾಗಿರುವಾಗ ಗಾಯಿತ್ರೀ ಮಂತ್ರವನ್ನು ಹಿಂದೂಗಳು ಸಂಸ್ಕೃತದಲ್ಲಿಯೇ ಓದಬೇಕೆಂದು, ನಮಾಜನ್ನು ಮುಸ್ಲಿಮ್‌ರು ಅರಬ್ಬೀ**

**ಭಾಷೆಯಲ್ಲಿಯೇ ಓದಬೇಕೆಂದು ಎಲ್ಲಾದರೂ ಸೂಚನಾಪ್ರಾಯವಾಗಿ ಯಾದರೂ ಹೇಳಿದ್ದಾನಾ?**

**ಉತ್ತರ :–** ದೇವರು ಸರ್ವರಿಗೂ ಸಮಾನವಾಗಿ ಇದ್ದಾನೆ ಆದರೆ ಕೆಲವರಿಗೆ ಹತ್ತಿರವಾಗಿ, ಕೆಲವರಿಗೆ ದೂರವಾಗಿ ಇಲ್ಲ. ಮನುಷ್ಯರೇ ಅವರ ಇಷ್ಟಬಂದಹಾಗೆ ನಡೆದುಕೊಳ್ಳುತ್ತಾ ಕೆಲವರು ದೇವರಿಗೆ ದೂರವಾಗಿ ಹೋಗುತ್ತಿದ್ದಾರೆ. ಕೆಲವರು ದೇವರು ಹೇಳಿದಹಾಗೆಯೇ ನಡೆದುಕೊಳ್ಳುತ್ತಾ, ತಮ್ಮ ಇಷ್ಟ ಏನೂ ಇಲ್ಲದೇ ಇರುವುದರಿಂದ ದೇವರಿಗೆ ಹತ್ತಿರವಾಗಿ ಹೋಗುತ್ತಿದ್ದಾರೆ. ದೇವರಿಗೆ ದೂರವಾಗಬೇಕೆಂದರೂ, ಹಾಗೇ ದೇವರಿಗೆ ಹತ್ತಿರವಾಗಬೇಕೆಂದರೂ ಮನುಷ್ಯನ **ಭಾವನೆಯ** ಮೇಲೆ, ಮನುಷ್ಯನ **ಪ್ರವರ್ತನೆಯ** ಮೇಲೆ ಆಧಾರಪಟ್ಟಿರುತ್ತದೆ. ದೇವರ ವಿಧಾನವನ್ನು, ದೇವರ ಜ್ಞಾನದ ಪ್ರಕಾರ ಆಚರಿಸದೆ ತಾವು ಪ್ರತ್ಯೇಕವಾಗಿ ನಿರ್ಣಯಿಸಿಕೊಂಡ ವಿಧಾನದ ಪ್ರಕಾರ ನಡೆದುಕೊಳ್ಳುವವರು, ಇದು ತಮ್ಮ ಕಾನೂನೆಂದೋ, ತಮ್ಮ ನಿಬಂಧನೆ ಎಂದೋ, ತಮಗೆ ಗುರುತಿರುವ ಆಚರಣೆ ಎಂದೋ, ಮತಕ್ಕೆ ಅನುಕೂಲವಾದ ವಿಧಾನವೆಂದೋ, ಯಾವುದು ಹೇಳಿದರೂ ಅದರ ಪ್ರಕಾರ ನಡೆದುಕೊಂಡರೂ, ದೇವರು ಹೇಳಿರುವ ಮಾತನ್ನು ಪಕ್ಕಕ್ಕಿಟ್ಟಂತಾಗುತ್ತದೆ. ದೇವರ ಜ್ಞಾನವನ್ನು ಕಡಿಮೆ ಮಾಡಿದಂತಾಗುತ್ತದೆ. ಈ ವಿಷಯದಲ್ಲಿ ಜಾಗ್ರತೆಯಾಗಿ ಇರಬೇಕು. ದೇವರು ಹೇಳಿರುವ ಮಾತುಗಳನ್ನು ಎಂದರೇ ಜ್ಞಾನವನ್ನು ಮನುಷ್ಯ ಅನುಸರಿಸಬೇಕು ಆದರೆ, ಮನುಷ್ಯ ತನಗಾಗಿ ಪ್ರತ್ಯೇಕವಾದ ದಾರಿಯನ್ನು, ಮತ ವಿಧಾನವನ್ನು ಕಲ್ಪಿಸಿಕೊಂಡಾಗ ಅದು ಅಜ್ಞಾನವಾಗುವುದು. ದೇವರಿಗೆ ವಿರುದ್ಧವಾಗುವುದು. ದೇವರು "ನಾನು ಹೇಳಿರುವುದು ಬಿಟ್ಟು ನೀನು ಹೇಳಿರುವುದನ್ನು ನಾನುಯಾಕೆ ಕೇಳಬೇಕು?" ಎಂದು ಪ್ರಶ್ನಿಸಬಲ್ಲನು.

ದೇವರ ಜ್ಞಾನದ ಮುಂದೆ ಮನುಷ್ಯರ ಜ್ಞಾನವು ಬಹಳ ಸ್ವಲ್ಪ. ಸ್ವಲ್ಪ ಜ್ಞಾನವಿರುವ ಮನುಷ್ಯ ದೇವರಿಗೆ ವಿರುದ್ಧವಾದ, ದೇವರು ಎಲ್ಲೂ ಹೇಳದ ವಿಧಾನವನ್ನು ಏರ್ಪಡಿಸಿಕೊಂಡು ತಾನು ಕೆಟ್ಟುಹೋಗುವುದೇ ಅಲ್ಲದೇ, "ತಾನು

ಕೆಟ್ಟ ಕೋತಿ ವನವೆಲ್ಲ ಕೆಡಿಸಿದಂತೆ" ತಾವು ಕೆಟ್ಟದಾರಿಯಲ್ಲಿ ಅಜ್ಞಾನ ಮಾರ್ಗದಲ್ಲಿ ನಡೆಯುವುದೇ ಅಲ್ಲದೇ, ಇತರರನ್ನು ಕೂಡಾ ಅದೇ ದಾರಿಯೊಳಗೆ ಬನ್ನಿ ಎಂದು ಕರೆಯುವುದು 'ಯಾರ ಹುಚ್ಚು ಅವರಿಗಾನಂದ ಎನ್ನುವಹಾಗೆ' ತಿಳಿಯುತ್ತಿದೆ. ಹಿಂದೂಗಳ ವಿಷಯದಲ್ಲಿ ನೋಡಿದರೇ ದೇವರು ಪ್ರಥಮ ದೈವಗ್ರಂಥವನ್ನು ಭಗವದ್ಗೀತೆ ಎಂಬ ಹೆಸರಿನಿಂದ ಕೊಟ್ಟಿದ್ದರೂ, ಅದರಲ್ಲಿನ ದೇವರ ಭಾವನೆಯನ್ನು ಗ್ರಹಿಸದೆ, ಗ್ರಂಥದಲ್ಲಿ ಎಲ್ಲೂ ಹೇಳದ ಒಂದು ಭಾಷೆಯನ್ನು ದೊಡ್ಡದೆಂದು ಹೇಳುತ್ತಾ, ಸಂಸ್ಕೃತ ಭಾಷೆಯಲ್ಲಿಯೇ ದೈವಾರಾಧನೆ ಮಾಡಬೇಕೆಂದು ಹೇಳುವುದು, ಅದೇ ದೈವಭಾಷೆ ಎಂದು ಹೇಳುವುದು ಭಾಷೆಯೊಂದಿಗೆ ಸಂಬಂಧವಿಲ್ಲದ ದೇವರಿಗೆ ಭಾಷೆಯನ್ನು ಅಂಟಿಸಿ ನೀನು ಕೂಡಾ ಇದನ್ನೇ ಕಲಿತುಕೋ ಎನ್ನುವಂತಿದೆ. ಭಾಷೆ ಪಾಲಿಸಲ್ಪಡುವವರೇ ಕಲಿಯಬೇಕೆ ಹೊರತು, ಪಾಲಿಸುವವರಿಗೆ ಅವಶ್ಯವಿಲ್ಲ. ಅವರು ಎಲ್ಲಾ ಭಾಷೆಗಳ ಭಾವನೆಗಳನ್ನು ಗ್ರಹಿಸಬಲ್ಲರು, ಎಲ್ಲಾ ಭಾಷೆಗಳಲ್ಲಿ ಮಾತನಾಡಬಲ್ಲರು. ಇನ್ನು ದೇವರಾಗಲೀ, ದೇವರ ಪ್ರತಿನಿಧಿಯಾದ ಆತ್ಮವಾಗಲೀ ಭಾಷೆಗಳೊಂದಿಗೆ ಸಂಬಂಧವಿಲ್ಲದೇ ಯಾರು ಯಾವ ಭಾಷೆಯನ್ನು ಮಾತನಾಡಿದರೂ ಅದರಲ್ಲಿನ ಭಾವನೆಯನ್ನು ಗ್ರಹಿಸುತ್ತಾರೆ. ಈ ವಿಧವಾಗಿ ಭಾಷೆಯೊಂದಿಗೆ ಸಂಬಂಧವಿಲ್ಲದೇ ಕೇವಲ ಭಾವನೆಯೊಂದಿಗೆಯೇ ಸಂಬಂಧವಿರುವ ದೇವರಿಗೆ ಕೂಡಾ ಭಾಷೆಯನ್ನು ಅಂಟಿಸುವುದು, ಇಂತಹ ಭಾಷೆಯಲ್ಲಿಯೇ ದೇವರನ್ನು ಹೇಳಬೇಕೆನ್ನುವುದು, ಇಂತಹ ಭಾಷೆಯೇ ದೇವರಿಗೆ ಇಷ್ಟವೆಂದು ಹೇಳುವುದು ನೋಡಿದರೇ, ದೇವರನ್ನು ಕೂಡಾ ಮನುಷ್ಯ ಸ್ಥಾನಕ್ಕೆ ತಂದು ಮನುಷ್ಯರ ಹಾಗೆ ದೇವರಿಗೆ ಕೂಡಾ ಭಾಷೆಮೇಲೆ ಇಷ್ಟಾಯಿಷ್ಟವಿದ್ದಂತೆ ಇರುವಹಾಗೆ ಹೇಳುವುದು ದೇವರನ್ನು ಅಗೌರವ ಪಡಿಸಿದಂತೆ ಅಲ್ಲವೇ? ಅಂತಿಮ ದೈವಗ್ರಂಥವಾದ ಖುರಾನ್ ಗ್ರಂಥದಲ್ಲಿ ಇಂತಹ ಭಾಷೆಯಲ್ಲಿಯೇ ಗ್ರಂಥವನ್ನು ಓದಬೇಕೆಂದಾಗಲೀ, ಇಂತಹ ಭಾಷೆಯಲ್ಲಿಯೇ ಪ್ರಾರ್ಥನೆ ಮಾಡಬೇಕೆಂದಾಗಲೀ ಎಲ್ಲೂ ಹೇಳಲಿಲ್ಲ. ಇದು ಎಲ್ಲರಿಗೂ ಸಂಬಂಧಿಸಿದ ಜ್ಞಾನವೆಂದಿದ್ದಾನೆ ಆದರೇ ಅರಬ್ಬೀ ಭಾಷೆ ಕಲಿತವರಿಗೇ ಅರ್ಥವಾಗುವ ಜ್ಞಾನವೆಂದು ಹೇಳಲಿಲ್ಲ.

ಖುರಾನ್ ಗ್ರಂಥದಲ್ಲಿ ಸೂರಾ 81, ಆಯತ್ 27ರಲ್ಲಿ ಹೀಗೆ ಬರೆಯಲ್ಪಟ್ಟಿದೆ ನೋಡಿರಿ.

**(81-27) "ಇದು ಸಮಸ್ತ ಲೋಕವಾಸಿಗಳಿಗಾಗಿ ಹಿತೋಪದೇಶ"**, ಹಾಗೆಯೇ **(6-90) "ಇದು ಸರ್ವಲೋಕದಲ್ಲಿನವರಿಗೆ ಒಂದು ಹಿತೋಪದೇಶ."**

ಎಂದು ಹೇಳಲ್ಪಟ್ಟಿದೆ. ಈ ವಾಕ್ಯಗಳ ಪ್ರಕಾರ ನೋಡಿದರೇ ಸರ್ವ ಲೋಕವಾಸಿಗಳಿಗೆ ಒಂದೇ ಭಾಷೆ ಬರುವುದಿಲ್ಲ ಅಲ್ಲವೇ! ಕೆಲವು ದೇಶಗಳಲ್ಲಿನ ಪ್ರಜೆಗಳಿಗೆ, ಕೆಲವು ಪ್ರದೇಶಗಳಲ್ಲಿನ ಪ್ರಜೆಗಳಿಗೆ ಅರಬ್ಬೀ ಭಾಷೆ ಒಂದಿದೆ ಎಂಬ ವಿಷಯವು ಕೂಡಾ ತಿಲಿದಿಲ್ಲ. ಎಲ್ಲಾ ದೇಶಗಳವರಿಗೆ ಅರಬ್ಬೀ ಭಾಷೆ ಬರುತ್ತದೆಂದು ಹೇಳಲಾರೆವು. ಅವರ ಪ್ರಾಂತೀಯ ಭಾಷೆ ಹೊರತು ಇತರ ಭಾಷೆಗಳು ತಿಳಿಯದವರು ಎಷ್ಟೋ ಜನರಿದ್ದಾರೆ. ಭಾರತ ದೇಶದಲ್ಲಿನ ಮುಸ್ಲಿಮ್‌ರಿಗೆ ಎಲ್ಲರಿಗೂ ಅರಬ್ಬೀ ಭಾಷೆ ಬರುವುದಿಲ್ಲ. ಇಲ್ಲಿನ ಮುಸ್ಲಿಮ್‌ರಲ್ಲಿ ಪಂಡಿತರಾದವರಿಗೆ ಮಾತ್ರವೇ ಅರಬ್ಬೀ ಭಾಷೆ ತಿಳಿದಿರುತ್ತದೆ. ಮುಸ್ಲಿಮ್‌ರಲ್ಲಿ ಸಾವಿರ ಜನರಲ್ಲಿ ಒಬ್ಬರಿಗಾದರೂ ಅರಬ್ಬೀ ಭಾಷೆ ಬರುತ್ತದೆಂದು ಹೇಳಲಾರೆವು. ಮುಸ್ಲಿಮ್‌ರಿಗೇ ಅರಬ್ಬೀ ಭಾಷೆ ತಿಳಿಯದಿರುವಾಗ ಉಳಿದವರಿಗೆ ಹೇಗೆ ತಿಳಿಯುತ್ತದೆ. ಆಗ ದೇವರು ಇದು ಸಮಸ್ತ ಪ್ರಜೆಗಳಿಗೆಂದು ಹೇಳಿರುವ ಮಾತು ವ್ಯರ್ಥವಾಗುತ್ತದೆ ಅಲ್ಲವೇ! "ಸಮಸ್ತ ಪ್ರಜೆಗಳಿಗೆ ಅವಶ್ಯವಾದ ಹಿತೋಪದೇಶ" ಎಂದು ಹೇಳಿದಾಗ ಅವರ ಭಾಷೆಯಲ್ಲಿ ಅವರು ಖುರಾನ್ ಗ್ರಂಥವನ್ನು (ಜ್ಞಾನವನ್ನು) ತಿಳಿಯಬಹುದೆಂದೇ ಅಲ್ಲವೇ ಅರ್ಥ. ದೇವರ ಜ್ಞಾನವನ್ನು ಭೂಮಿಮೇಲೆ ಯಾವ ಪ್ರವಕ್ತನ ಮೂಲಕ ಹೇಳಿಸಿದರೂ, ಅದು ಆ ಪ್ರದೇಶದ ಭಾಷೆಯಲ್ಲಿ ಮಾತನಾಡುವ ಪ್ರವಕ್ತನಿಂದಲೇ ದೇವರು ಹೇಳಿಸಿದ್ದಾನೆಂದು ಆಧಾರವಿದೆ. ಅದೇ ವಿಷಯವನ್ನೇ ಖುರಾನ್ ಗ್ರಂಥದಲ್ಲಿ 14ನೇ ಸೂರಾ, 4ನೇ ಆಯತ್‌ನಲ್ಲಿ ಹೀಗೆ ಹೇಳಿದ್ದಾರೆ ನೋಡಿರಿ. **(14–4) "ನಾವು ಯಾವ ಪ್ರವಕ್ತನನ್ನು ಕಳುಹಿಸಿದರೂ, ಆತನು ದೈವ ವಿಷಯವನ್ನು ಸ್ಪಷ್ಟವಾಗಿ ಬಿಡಿಸಿ ಹೇಳುವುದಕ್ಕೆ ಸಾಧ್ಯವಾಗುವಂತೆ ತನ್ನ ಜಾತಿಯವರ ಭಾಷೆಯಲ್ಲಿ**

**ಮಾತನಾಡುವವನನ್ನೇ ಕಳುಹಿಸಿದ್ದೇವೆ. ಆಮೇಲೆ ಅಲ್ಲಾಹ್ (ದೇವರು) ತಾನು ಕೋರಿರುವವರನ್ನು ಅಪಮಾರ್ಗ ಹಿಡಿಸುತ್ತಾನೆ. ಹಾಗೆಯೇ ತಾನು ಕೋರಿರುವವರಿಗೆ ಸನ್ಮಾರ್ಗವನ್ನು ತೋರಿಸುತ್ತಾನೆ. ಆತನು ಸರ್ವಾಧಿಕನು"** ಈ ವಾಕ್ಯದ ಪ್ರಕಾರ ನೋಡಿದರೆ ದೇವರು ತನ್ನ ಜ್ಞಾನವನ್ನು ಅವರ ಪ್ರಾಂತ ಭಾಷೆಯಲ್ಲಿಯೇ ತಿಳಿಯುವುದಕ್ಕೆ ಆ ಪ್ರಾಂತದ ಭಾಷೆಯನ್ನು ಮಾತನಾಡುವ ಪ್ರವಕ್ತನನ್ನೇ ಕಳುಹಿಸುತ್ತೇನೆ ಎಂದು ಹೇಳಿದ್ದಾನೆಂದರೇ ಅಲ್ಲಿ ಒಂದೇ ಭಾಷೆಗೆ ಪ್ರಾಧಾನ್ಯತೆ ಕೊಡಲಿಲ್ಲವೆಂದು, ಯಾವ ಭಾಷೆಯಲ್ಲಾದರೂ ಜ್ಞಾನವನ್ನು ತಿಳಿಯಬಹುದೆಂದು, ಹಾಗೆ ಅವರಿಗೆ ತಿಳಿದ ಭಾಷೆಯಲ್ಲಿ ತಿಳಿಯುವುದಕ್ಕೆ ಅವರ ಭಾಷೆ ಬಂದ ಪ್ರವಕ್ತನನ್ನೇ ಕಳುಹಿಸುತ್ತೇನೆಂದು  ಸ್ವತಃವಾಗಿ ಅಲ್ಲಾಹ್‌ಆದ ಆತನೇ ಹೇಳಿದ್ದಾನೆಂದರೇ ಆತನ ಮಾತನ್ನು ಕೂಡಾ ಲೆಕ್ಕಿಸದೆ ನಾವು ಜ್ಞಾನಿಗಳೆಂದು ಅಂದುಕೊಂಡು, ಒಂದು ಮತವನ್ನು ಅಡ್ಡ ಇಟ್ಟುಕೊಂಡು, ಆ ಮತದ ಮರೆಯಲ್ಲಿ, ಆ ಮತಕ್ಕೆ ಅನುಕೂಲವಾದ ಭಾಷೆಯನ್ನು ಅಡ್ಡಇಟ್ಟುಕೊಂಡು ಈ ಮತ ಪ್ರಜೆಗಳೆಲ್ಲರೂ ಅರಬ್ಬೀ ಭಾಷೆಯಲ್ಲಿಯೇ ಪ್ರಾರ್ಥನೆ ಮಾಡಬೇಕು, ಗ್ರಂಥ ಓದಬೇಕು ಎಂದು ಹೇಳುವುದು (14–4) ರಲ್ಲಿರುವ ದೇವರ ಉದ್ದೇಶಕ್ಕೆ ವಿರುದ್ಧವಾಗಿ ಮಾತನಾಡಿದಂತಲ್ಲವೇ! ಒಂದು ಕಡೆ ಮತಕ್ಕೆ ಅನುಕೂಲವಾಗಿ, ಮತ್ತೊಂದುಕಡೆ ದೇವರಿಗೆ ವಿರುದ್ಧವಾಗಿ ಮಾತನಾಡುವವರು ದೇವರಿಗೆ ವಿಶ್ವಾಸಿಗಳಾಗುತ್ತಾರಾ? ಅವರನ್ನು ಮುಸ್ಲಿಮ್‌ಗಳೆಂದು ಹೇಳಬಹುದಾ? ಮುಸ್ಲಿಮ್ ಎಂದರೇ ವಿಶ್ವಾಸಿ ಎಂದೂ, ಅಲ್ಲಾಹ್‌ನನ್ನು ಪೂರ್ತಿ ವಿಶ್ವಾಶಿಸಿದವನೆಂದು ಅರ್ಥ ಅಲ್ಲವೇ! ಅಲ್ಲಾಹ್‌ನನ್ನು ವಿಶ್ವಾಶಿಸಿದವರು ದೇವರು ಹೇಳಿರುವುದಕ್ಕೆ ವಿರುದ್ಧವಾಗಿ ಹೇಳುತ್ತಾರಾ? ಖುರಾನ್ ಗ್ರಂಥದಲ್ಲಿ ಎಲ್ಲಾದರೂ ಅರಬ್ಬೀ ಭಾಷೆಯಲ್ಲಿಯೇ ಗ್ರಂಥವನ್ನು ಓದಿರೆಂದು, ಪ್ರಾರ್ಥನೆ ಮಾಡಿರೆಂದಾಗಲೀ ಇಲ್ಲದಿರುವಾಗ ಯಾಕೆ ಅರಬ್ಬೀ ಭಾಷೆಯನ್ನು ಕುರಿತು ಹೇಳಬೇಕಾಗಿ ಬಂದಿದೆ ಎಂದು ಕೇಳುತ್ತಿದ್ದೇವೆ? ಯಾರಾದರೂ ಕೇಳಬಲ್ಲರು? (14–4) ನೇ ಆಯತ್‌ನಲ್ಲಿ ತನಗೆ ವಿರುದ್ಧವಾಗಿ ಮಾತನಾಡುವವರನ್ನು ಎಂದರೇ 'ತನಗೆ ಇಷ್ಟವಿಲ್ಲದವರನ್ನು ಅಪಮಾರ್ಗದಲ್ಲಿ ಕಳುಹಿಸುತ್ತೇನೆ" ಎಂದು ಕೂಡಾ ಹೇಳಿದ್ದಾನೆ. ತನಗೆ

ಇಷ್ಟವಾದವರನ್ನು ಎಂದರೇ ತನ್ನ ಮಾತಿನ ಪ್ರಕಾರ ನಡೆದುಕೊಳ್ಳುವವರನ್ನು, ತನ್ನ ಜ್ಞಾನವನ್ನು ವಿಶ್ವಾಶಿಸುವವರನ್ನು ಸನ್ಮಾರ್ಗದೊಳಗೆ ಕಳುಹಿಸುತ್ತೇನೆಂದು ಹೇಳಿದ್ದಾನೆ. ಭಾಷೆ ವಿಷಯದಲ್ಲಿ ಇತ್ತ ಹಿಂದೂಗಳು, ಅತ್ತ ಮುಸ್ಲಿಮ್‌ರು ಇಬ್ಬರೂ ತಪ್ಪಾಗಿ ಮಾತನಾಡುವುದರಿಂದ, ದೇವರು ಹೇಳದಿರುವ ವಿಷಯವನ್ನು ತಾವೇ ಸ್ವತಃವಾಗಿ ಹೇಳುವುದರಿಂದ ದೇವರ ವಿಷಯದಲ್ಲಿ ಇಬ್ಬರೂ ತಪ್ಪು ಮಾಡಿದಂತೆಯೇ ಆಗುತ್ತದೆ.

**21) ಪ್ರಶ್ನೆ :– ಹಿಂದೂಗಳು ನಮ್ಮದು ಎನ್ನುವ ಭಗವದ್ಗೀತೆ ಸಂಸ್ಕೃತದಲ್ಲಿ ತಯಾರಾಗಿದೆ. ಮುಸ್ಲಿಮ್‌ರು ನಮ್ಮದೆನ್ನುವ ಖುರಾನ್ ಅರಬ್ಬೀ ಭಾಷೆಯಲ್ಲಿ ತಯಾರಾಗಿದೆ. ಆದ್ದರಿಂದ ಭಗವದ್ಗೀತೆಗೆ ಮಾತೃಭಾಷೆ ಸಂಸ್ಕೃತ ಭಾಷೆ ಎಂದೂ, ಖುರಾನ್‌ಗೆ ಮಾತೃಭಾಷೆ ಅರಬ್ಬೀ ಭಾಷೆ ಎಂದೂ ಹೇಳುತ್ತಿರುತ್ತಾರೆ. ಅದರಿಂದ ಹಿಂದೂಗಳಿಗೆ ಸಂಸ್ಕೃತ ಭಾಷೆ ಮುಖ್ಯವೆಂದು, ಮುಸ್ಲಿಮ್‌ರಿಗೆ ಅರಬ್ಬೀ ಭಾಷೆ ಮುಖ್ಯವೆಂದು ಕೆಲವರು ಹೇಳುತ್ತಿದ್ದಾರೆ. ಹಾಗೆ ಹೇಳುವುದು ನ್ಯಾಯವೇನಾ?**

**ಉತ್ತರ :–** ಭಗವದ್ಗೀತೆಯನ್ನು ಬರೆದರೂ, ಖುರಾನ್‌ನನ್ನು ಬರೆದರೂ ಬರೆದವನು ಮನುಷ್ಯನಾದ್ದರಿಂದ ಆ ಪ್ರದೇಶದಲ್ಲಿ ಎಲ್ಲರೂ ಬರೆಯುವ ಭಾಷೆ ಯಾವುದಾದರೆ ಇದೆಯೋ ಅದೇ ಭಾಷೆಯಲ್ಲಿ ಬರೆದಿದ್ದಾರೆ. ಅದು ಆ ಪ್ರದೇಶದ ವಾಸಿಗರು ಓದುವುದಕ್ಕೆ ಅನುಕೂಲವಾಗಿರುತ್ತದೆ. ಒಂದುವೇಳೆ ಭಗವದ್ಗೀತೆ ಕೇರಳ ರಾಷ್ಟ್ರದಲ್ಲಿ ಹೇಳಿದ್ದರೇ ಅಲ್ಲಿನ ಪ್ರಾಂತೀಯ ಭಾಷೆ ಯಾವುದಾದರೇ ಇದೆಯೋ ಅದೇ ಭಾಷೆಯಲ್ಲಿ ಭಗವದ್ಗೀತೆ ಬರೆಯಲಾಗುತ್ತಿತ್ತು. ಭಗವದ್ಗೀತೆ ಕೇರಳಾದಲ್ಲಿ ಬೋಧಿಸಲ್ಪಟ್ಟಿದ್ದರೇ ತಪ್ಪದೇ ಆ ಪ್ರದೇಶದ ಭಾಷೆಯಾದ ಮಲಯಾಳ ಭಾಷೆಯಲ್ಲಿ ಬರೆದಿರುತ್ತಿದ್ದರು. ಮಳಯಾಳ ಭಾಷೆ ಆ ಪ್ರದೇಶದಲ್ಲಿಯೇ ತಿಳಿಯುವುದು. ಪಕ್ಕದಲ್ಲೇ ಇರುವ ತಮಿಳುನಾಡಿನಲ್ಲಾಗಲೀ, ಆಂಧ್ರಾದಲ್ಲಾಗಲೀ ತಿಳಿಯುವುದಿಲ್ಲ. ಆದ್ದರಿಂದ ಮೊದಲು ಗ್ರಂಥ ತಯಾರಾದ ಭಾಷೆಯಲ್ಲಿಯೇ ಗ್ರಂಥವನ್ನು ಓದಬೇಕು ಇತರ ಭಾಷೆಯಲ್ಲಿ ಓದಬಾರದೆನ್ನುವ ನಿಯಮ ಕೆಲಸಕ್ಕೆ ಬರುವುದಿಲ್ಲ. ಯಾವ ಗ್ರಂಥವನ್ನು ಯಾರೂ ಹಾಗೆ

ಓದಲಾರರು. ಎಲ್ಲರೂ ಓದುವುದಕ್ಕೆ ಒಂದು ಭಾಷೆಯಲ್ಲಿ ತಯಾರಾದುದನ್ನು ಅನೇಕ ಭಾಷೆಗಳೊಳಗೆ ಬದಲಾಯಿಸಿ ಬರೆದುಕೊಂಡು ಓದಿಕೊಳ್ಳುತ್ತಿದ್ದೇವೆ. ಕಾಳಿದಾಸ ಕವಿ ತೆಲುಗಿನಲ್ಲಿ "ಪಾರಿಜಾತಾಪಹರಣ" ಎನ್ನುವ ಕಾವ್ಯವನ್ನು ಬರೆದಾಗ ಅದು ಉಳಿದ ಭಾಷೆಗಳೊಳಗೆ ಕೂಡಾ ಸೇರಿಹೋಗಿದೆ. ಆಗ ಕಾಳಿದಾಸ ಬರೆದಿರುವ ವಿಷಯವೇನೋ ಉಳಿದ ಪ್ರದೇಶ ಪ್ರಜೆಗಳಿಗೆ ಸುಲಭವಾಗಿ ತಿಳಿದುಹೋಗಿದೆ. ಹಾಗಲ್ಲದೇ ಹೋಗಿದ್ದರೇ ಅದು ತೆಲುಗಿನಲ್ಲಿಯೇ ಇದ್ದರೇ ತೆಲುಗು ಪ್ರಜೆಗಳಿಗೆ ಮಾತ್ರ ಪರಿಮಿತವಾಗಿ ಹೋಗುತ್ತಿತ್ತು. ತೆಲುಗಿನಲ್ಲಿ ಹೊರತುಪಡಿಸಿ ಇತರ ಭಾಷೆಯಲ್ಲಿ ಓದಬಾರದೆಂದು ಹೇಳಿದ್ದರೇ, ಅದರಲ್ಲಿ ಗೂಡಾರ್ಥ ಇತರ ಪ್ರಜೆಗಳಿಗೆ ಕಾಳಿದಾಸ ಬರೆದಿರುವುದು ತಿಳಿಯಬಾರದೆನ್ನು ವುದೇ ಅಲ್ಲವೇ ಅರ್ಥ.

ಅದೇ ವಿಧವಾಗಿ ಈ ದಿನ ಖುರಾನ್ ಗ್ರಂಥವೊಂದರ ಜ್ಞಾನವು ಮುಸ್ಲಿಮ್‌ರೆಲ್ಲರಿಗೂ ತಿಳಿಯುಬಾರದೆಂದು ಕೆಲವರು ಮುಸ್ಲಿಮ್‌ರು ಅಂದುಕೊಳ್ಳುತ್ತಿರುವುದರಿಂದ ಅದನ್ನು ಮುಸ್ಲಿಮ್‌ರೆಲ್ಲರೂ ಅರಬ್ಬೀ ಭಾಷೆಯಲ್ಲಿಯೇ ಓದಬೇಕೆಂದು ನಿಯಮವನ್ನು ಇಟ್ಟಿದ್ದಾರೆ. ಒಂದು ಅರಬ್ಬೀ ದೇಶದಲ್ಲಿ ಹೊರತು ಇತರ ದೇಶಗಳಲ್ಲಿ ಅರಬ್ಬೀ ಭಾಷೆ ಬಾರದಿರುವುದರಿಂದ ಮುಸ್ಲಿಮ್‌ರು ಖುರಾನ್ ಓದಲಾರರು. ಅವರಿಗೆ ಖುರಾನ್ ಜ್ಞಾನ ತಿಳಿದಿಲ್ಲ. ಕೆಲವರು ಖುರಾನ್‌ನನ್ನು ಓದುವ ಸಲುವಾಗಿ ಅರಬ್ಬೀ ಭಾಷೆ ಲಿಪಿಯನ್ನು ಕಲಿತುಕೊಂಡು ಓದಿದರೂ, ಭಾಷೆಯ ಅರ್ಥ ತಿಳಿಯದೇ ಹೋಗಿರುವುದರಿಂದ ಯಾವ ಪ್ರಯೋಜನೆ ಇಲ್ಲ. ಗ್ರಂಥದಲ್ಲಿನ ವಿಷಯವೇನೋ ಸ್ವಲ್ಪವೂ ತಿಳಿದಿಲ್ಲ. ಅದು ಓದುವ ಸಲುವಾಗಿ ಕಲಿತಿರುವುದೇ ಹೊರತು ಅರ್ಥವಾಗುವುದಕ್ಕೆ ಅಲ್ಲವೆಂದು ತಿಳಿಯುತ್ತಿದೆ. ಒಟ್ಟಾರೆ ಮುಸ್ಲಿಮ್‌ರು ಅರಬ್ಬೀ ಭಾಷೆಯಲ್ಲಿಯೇ ಓದಬೇಕೆಂಬ ನಿಯಮವನ್ನು ಪಾಟಿಸುವುದು ಮತಪರವಾದ್ದರಿಂದ ಅದನ್ನು ಅತಿಕ್ರಮಿಸಿ ಹೋಗದೇ ಇದ್ದಾರೆ. ಈದಿನ ಪ್ರಾಂತೀಯ ಭಾಷೆಗಳೊಳಗೆ ಖುರಾನ್ ಬರೆಯಲಾಗಿದೆ. ತೆಲುಗು ಭಾಷೆಯಲ್ಲಿ ತಯಾರಾದ ಖುರಾನ್ ಗ್ರಂಥಗಳನ್ನು

ತೆಲುಗಿನವರಿಗೆ ಕೆಲವರು ಮುಸ್ಲೀಮ್ ಹಿರಿಯರು ಉಚಿತವಾಗಿ ಕೊಡುತ್ತಿದ್ದಾರೆ. ಆದರೇ ಅದು ತೆಲುಗು ಬಂದ ಹಿಂದೂಗಳು ಓದುವ ಸಲುವಾಗಿಯೇ ಕೊಡುತ್ತಿದ್ದಾರೆ. ಅದೇ ತೆಲುಗು ಖುರಾನ್ ಗ್ರಂಥವನ್ನು ಮುಸ್ಲಿಮ್‌ರಿಗೆ ಒಬ್ಬರಿಗು ಕೂಡಾ ಕೊಡುತ್ತಿಲ್ಲ. ತೆಲುಗಿನಲ್ಲಿ ಹಿಂದೂಗಳು ಓದಿ ತಮ್ಮ ಮತದಲ್ಲಿ ಸೇರಬೇಕೆಂಬ ಉದ್ದೇಶದಿಂದ ಖುರಾನ್‌ನನ್ನು ತೆಲುಗು ಭಾಷೆಗೆ ಅನುವಾದಿ ಸಿದ್ದಾರೆ ಹೊರತು ಬೇರೆ ಉದ್ದೇಶವಿಲ್ಲ. ಈದಿನ ಕೆಲವರು ಹಿಂದೂಗಳು ತಮ್ಮ ಮತವನ್ನು ಬಿಟ್ಟು ಇಸ್ಲಾಮ್ ಕಡೆ ಆಕರ್ಷಿತರಾಗಿ ಮುಸ್ಲಿಮ್‌ರಾಗಿ ಬದಲಾಗಿ ಹೋದವರಿದ್ದಾರೆ. ಮತವನ್ನು ಬದಲಾಯಿಸಿಕೊಂಡು ಮುಸ್ಲಿಮ್‌ರಾಗಿ ತಯಾರಾದವರು ದೇವರ ಪ್ರಾರ್ಥನೆಯನ್ನು ಎಂದರೇ ನಮಾಜನ್ನು ಅರಬ್ಬೀಯೊಳಗೇ ಓದುತ್ತಿದ್ದಾರೆ. ಅರಬ್ಬೀ ಬಾರದೇ ಹೋದರೂ ಪದಗಳನ್ನು ಕಂಠಸ್ಥ ಮಾಡಿ ಓದುತ್ತಿದ್ದಾರೆ. ಹಾಗೆ ಓದುವುದರಿಂದ ಆ ಪ್ರಾರ್ಥನೆ ಯಾಂತ್ರಿಕವಾಗಿರುವುದಾಗಿದೆ. ಅದರಲ್ಲಿನ ಅರ್ಥ ತಿಳಿಯದೇ ಹೋಗಿರುವು ದರಿಂದ ಓದುವ ಪ್ರಾರ್ಥನೆಯಲ್ಲಿ ಭಾವನೆ ಏನೂ ಇಲ್ಲ. ಅದರಿಂದ ಯಾವ ಪ್ರಯೋಜನೆ ಇರುವುದಿಲ್ಲ. ದೇವರಿಗೆ ಭಾಷೆ ಮುಖ್ಯವಲ್ಲ. ಭಾಷೆಯನ್ನು ನೋಡುವುದಿಲ್ಲ. ದೇವರು ಭಾವನೆಯನ್ನು ಮಾತ್ರ ಗ್ರಹಿಸಬಲ್ಲನೆಂದು ಮೊದಲೇ ಹೇಳಿದ್ದೇವೆ. ಹಾಗಿರುವಾಗ ಮನುಷ್ಯನಲ್ಲಿ ಭಾವನೆ ಇಲ್ಲದೇ ಭಾಷೆಯೊಂದಿಗೆ ಪ್ರಾರ್ಥನೆಯನ್ನು ಓದಿದರೂ ಆ ಪ್ರಾರ್ಥನೆಯನ್ನು ದೇವರು ಸ್ವೀಕರಿಸುವುದಿಲ್ಲ. ಅದರಲ್ಲಿ ಭಾಷೆ ಇದೆಯೇ ಹೊರತು ಭಾವನೆ ಇಲ್ಲ. ದೇವರಿಗೆ ಭಾಷೆಯೊಂದಿಗೆ ಕೆಲಸವಿಲ್ಲ, ಭಾವನೆಯೊಂದಿಗೆಯೇ ಕೆಲಸವಾಗುವುದರಿಂದ ಭಾವನೆಯಲ್ಲಿನ ಆರಾಧನೆ ವ್ಯರ್ಥವಾಗುತ್ತದೆ.

ಹಿಂದೂಗಳು ಸಂಸ್ಕೃತದಲ್ಲಿ ಮಂತ್ರವನ್ನು ಕಲಿತು ಗುಡಿಯಲ್ಲಿ ಓದಿದರೂ ಅದು ಅಲ್ಲಿರುವ ವಿಗ್ರಹಗಳು ಕೇಳುತ್ತವೆ ಆದರೆ, ದೇವರು ಮಾತ್ರ ಕೇಳುವುದಿಲ್ಲ. ಸಂಸ್ಕೃತ ಭಾಷೆಯನ್ನು ದೇವರು ಗ್ರಹಿಸುವುದಿಲ್ಲ ಆದರೇ ಮನುಷ್ಯನಲ್ಲಿನ ಭಾವನೆಯನ್ನು ಗ್ರಹಿಸುತ್ತಾನೆ. ಹಾಗಿರುವಾಗ ಆರಾಧನೆ ಮಾಡಬೇಕೆಂದು

ಮಾಡುತ್ತಿದ್ದಾನೆ ಹೊರತು ತನಗೆ ಜ್ಞಾನ ಬೇಕೆಂದಾಗಲೀ, ಮೋಕ್ಷ ಬೇಕೆಂದಾಗಲೀ, ಆತನ ಭಾವನೆಯಲ್ಲಿ ಇಲ್ಲದೇ ಇರುವುದರಿಂದ ಆರಾಧನೆ ಮಾಡುವವನಿಗೆ ದೇವರ ಕಡೆಯಿಂದ ಎಂತಹ ಲಾಭವೂ ಇರುವುದಿಲ್ಲ. ಅದೇ ವಿಧವಾಗಿ ಮುಸ್ಲಿಮ್‌ರು ಮುಸ್ಲಿಮ್‌ರ ನಿಯಮದ ಪ್ರಕಾರ ನಮಾಜ್ ಅರಬ್ಬೀ ಭಾಷೆಯಲ್ಲಿ ಮಾಡಿದರೂ, ಅವರಲ್ಲಿನ ಭಾವನೆ ಏನೂ ಇಲ್ಲದಿರುವುದರಿಂದ ಅವರಿಗೆ ದೇವರ ಕಡೆಯಿಂದ ಎಂತಹ ಪ್ರಯೋಜನೆ ಇರುವುದಿಲ್ಲ. ಅರ್ಥ ತಿಳಿಯದೇ ಅರಬ್ಬೀ ಭಾಷೆಯಲ್ಲಿ ನಮಾಜ್ ಮಾಡಿದರೂ ಆ ಭಾಷೆಯನ್ನು ದೇವರು ನೋಡುವುದಿಲ್ಲ, ಭಾವನೆಯನ್ನು ಮಾತ್ರ ನೋಡುವನು.

**22) ಪ್ರಶ್ನೆ :– ನೀವು ಹಿಂದೂಗಳಾದಕಾರಣ ನೀವು ಭಗವದ್ಗೀತೆಯನ್ನು ಕುರಿತು ಮಾತನಾಡಬಹುದು ಹಾಗೆಯೇ ಆರಾಧನೆ ವಿಷಯವಾಗಿ ಗಾಯತ್ರೀ ಮಂತ್ರವನ್ನು ಕುರಿತು ಮಾತನಾಡಬಹುದು. ಆದರೇ ಮುಸ್ಲಿಮ್‌ರಿಗೆ ಸಂಬಂಧಿಸಿದ ಖುರಾನ್ ಕುರಿತು ಬರೆಯುವುದು ಇತರರ ವಿಷಯದಲ್ಲಿ ಬೆರಳಿಟ್ಟಂತೆ ಅಲ್ಲವೇ? ಇತರರ ವಿಷಯವು ಅವರಿಗೇ ಬಿಟ್ಟುಹಾಕಿ, ನೀವು ನಿಮ್ಮ ಮತ, ನಿಮ್ಮ ಗ್ರಂಥದ ವರೆಗೆ ಮಾತನಾಡುವುದು ಸರಿಯಾದ ಪದ್ಧತಿ ಆಗುತ್ತದೆ ಅಲ್ಲವೇ?**

**ಉತ್ತರ :–** ಖುರಾನ್ ಒಂದು ಮತಕ್ಕೆ ಸಂಬಂಧಿಸಿರುವ ಗ್ರಂಥವಲ್ಲ. ಹಾಗೆಯೇ ಭಗವದ್ಗೀತೆ ಕೂಡಾ ಹಿಂದೂಗಳಿಗೆ ಸಂಬಂಧಿಸಿರುವುದಲ್ಲ. ಭಗವದ್ಗೀತೆ ಹಿಂದೂಗಳದ್ದು, ಖುರಾನ್ ಮುಸ್ಲಿಮ್‌ರದ್ದು ಎನ್ನುವುದು ಪೂರ್ತಿ ತಪ್ಪು. ಮುಸ್ಲಿಮ್‌ರು ಖುರಾನ್‌ಗೆ, ಹಿಂದೂಗಳು ಭಗವದ್ಗೀತೆಗೆ ಅಭ್ಯಾಸವಾಗಿರಬಹುದು. ಅಷ್ಟುಮಾತ್ರಕ್ಕೆ ಗೀತೆ ಅವರದ್ದಲ್ಲ, ಖುರಾನ್ ಇವರದ್ದಲ್ಲ. ದೈವಗ್ರಂಥವು ಯಾವುದಾದರೂ ಸಮಸ್ತ ಮಾನವರಿಗೆ ಸಂಬಂಧಿಸಿರುವುದಾಗಿ ಇರುತ್ತದೆ. ಯಾವ ಮತಕ್ಕೆ ಸಂಬಂಧಿಸಿದ ಮನುಷ್ಯನಾದರೂ ತನಗೆ ಅಭ್ಯಾಸವಾದ ಗ್ರಂಥವನ್ನೇ ಅಲ್ಲದೇ ಮೂರು ದೈವಗ್ರಂಥಗಳನ್ನು ಸಮಾನವಾಗಿ ಗೌರವಿಸಬೇಕಾದ ಜವಾಬ್ದಾರಿ ಎಲ್ಲರಿಗೂ ಇದೆ. ಮೂರು ದೈವಗ್ರಂಥಗಳನ್ನು ಚೆನ್ನಾಗಿ ಪರಿಶೀಲಿಸಿ ನೋಡಿದರೇ **ಮೂರು ಗ್ರಂಥಗಳಲ್ಲಿ ಒಂದೇ ದೇವರು, ಒಂದೇ ದೇವರ ಜ್ಞಾನವಿದೆ.**

ಹಾಗಿರುವಾಗ ಭೇದ ತೋರಿಸುವುದಕ್ಕೆ ಅವಕಾಶವೇ ಇಲ್ಲ. ಮತಗಳಲ್ಲಿ ಆಚರಣೆಗಳಲ್ಲಿ, ಆರಾಧನೆಗಳಲ್ಲಿ ಭೇದವಿರಬಹುದು ಆದರೇ ದೇವರ ಜ್ಞಾನದಲ್ಲಿ ಯಾವ ಭೇದವಿಲ್ಲ. ಅಂತಿಮ ದೈವಗ್ರಂಥವಾದ ಖುರಾನ್ ಗ್ರಂಥದಲ್ಲಿ ಮೊದಲು ಬಂದಿರುವ ಎರಡು ಗ್ರಂಥಗಳಲ್ಲಿನ ಜ್ಞಾನವೇ ತನ್ನಲ್ಲಿದೆ ಎಂದು, ಮೊದಲು ಬಂದಿರುವ ಭಗವದ್ಗೀತೆ (ತೌರಾತ್), ಇಂಜೀಲು (ಬೈಬಲ್) ನಲ್ಲಿ **ಜ್ಞಾನಜ್ಯೋತಿ, ಮಾರ್ಗದರ್ಶಕತೆ** ಇದೆಯೆಂದು ದೃಢೀಕರಿಸಿದಂತೆ ಅನೇಕ ಕಡೆ ಹೇಳಲ್ಪಟ್ಟಿದೆ. ಇದನ್ನೆಲ್ಲವನ್ನು ಗಮನಿಸಿದ ನಂತರ ಮೂರು ದೈವಗ್ರಂಥಗಳನ್ನು ಸಮಾನವಾಗಿ ನೋಡದವನನ್ನು ಅಜ್ಞಾನಿ ಕೆಳಗೆ ಜಮಕಟ್ಟಬಹುದು. ಮೂರು ದೈವಗ್ರಂಥಗಳಲ್ಲಿ ಒಂದು ದೊಡ್ಡದು, ಒಂದು ಚಿಕ್ಕದು ಎಂದು ಹೇಳುವುದಕ್ಕೆ ಎಲ್ಲೂ ಆಧಾರವಿಲ್ಲ. ಇದೆಲ್ಲವನ್ನು ಗಮನಿಸದೇ ಇದು ನಮ್ಮ ಗ್ರಂಥವೆಂದು ಯಾರೂ, ಯಾವ ಮತಸ್ಥನೂ ಮಾತನಾಡಬಾರದು. ಒಬ್ಬ ಮುಸ್ಲಿಮ್ ಪಂಡಿತನು ಖುರಾನ್ ಗ್ರಂಥವನ್ನು ಕುರಿತು ಎಷ್ಟು ಒಳ್ಳೆಯ ಅಭಿಪ್ರಾಯವನ್ನು ತಿಳಿಸಿದ್ದಾನೋ ಒಂದುಬಾರಿ ನೋಡೋಣ.

'ಖುರಾನ್ ಭಾವಾಮೃತ' ಅನುವಾದಕರಾದ ಅಬುಲ್ ಇರ್ಫಾನ್‌ರವರು ಅವರ ಮನೋಭಾವನೆಯನ್ನು ತನ್ನ ಗ್ರಂಥದಲ್ಲಿ ಪರಿಚಯಾತ್ಮಕದಲ್ಲಿ ಹೀಗೆ ತಿಳಿಸಿದ್ದಾನೆ ನೋಡಿರಿ.

**"ಏನೇ ಆದರೂ ಖುರಾನ್ ಯಾವತ್ ಮಾನವರಿಗಾಗಿ ಅವತರಿಸಿದ ಅಂತಿಮ ದೈವಗ್ರಂಥ. ಇದು ಪ್ರಪಂಚ ಮಾನವರೆಲ್ಲರ ಪಾಲಿನ ಸ್ವತ್ತು. ಇದರಮೇಲೆ ಯಾವ ಒಂದು ಜಾತಿಗೂ, ವರ್ಗಕ್ಕೂ ಗುತ್ತಾಧಿಪತ್ಯವಿಲ್ಲ. ಗಾಳಿ, ನೀರು, ಸೂರ್ಯರಶ್ಮಿ ಮೊದಲಾದ ಪ್ರಕೃತಿ ವನರಗಳನ್ನು ಮಾನವನು ಹೇಗೆ ವಿನಿಯೋಗಿಸಿ ಕೊಂಡು ಪ್ರಯೋಜನೆ ಪಡೆಯುತ್ತಿದ್ದಾನೋ ಖುರಾನ್‌ನಿಂದಲೂ ಕೂಡಾ ಹಾಗೆಯೇ ಪ್ರಯೊಜನೆ ಪಡೆಯಬಹುದು. ಇದು ಇಹಲೋಕದಲ್ಲಿ ಮಾನವರ ಮಾರ್ಗ ದರ್ಶನಕ್ಕಾಗಿ, ಪರಲೋಕದಲ್ಲಿ ಅವರ ಮುಕ್ತಿ ಮೋಕ್ಷಗಳಿಗಾಗಿ ಸರ್ವೇಶ್ವರನು ಕಳುಹಿಸಿರುವ ಏಕೈಕ ಹಿತವಾಣಿ. ಇದರಲ್ಲಿ ಸತ್ಯಾನ್ವೇಷಕರಿಗೆ ಆಸಕ್ತಿಕರವಾದ**

**ಅನೇಕ ವಿಷಯಗಳಿವೆ. ಆದ್ದರಿಂದ ಸತ್ಯವನ್ನು ಪ್ರೇಮಿಸಿ, ಮೋಕ್ಷವನ್ನು ಕೋರಿಕೊಳ್ಳುವ ಪ್ರತಿಯೊಬ್ಬರೂ ಕನಿಷ್ಟ ಒಂದುಬಾರಿಯಾದರೂ ಪ್ರಶಾಂತವಾಗಿ ಆಲೋಚಿಸಿ ಇದನ್ನು ಅಧ್ಯಯನ ಮಾಡಬೇಕಾಗಿರುವ ಅವಶ್ಯಕತೆ ಎಷ್ಟಾದರೂ ಇದೆ."**

**ಅಬ್ದುಲ್ ಇರ್ಫಾನ್**

(ಅನುವಾದಕನು)

ಇರ್ಫಾನ್‌ರವರು ಹೇಳಿದಂತೆ ಒಂದು ದೈವಗ್ರಂಥ ಯಾವುದೂ ಅಲ್ಲದ ಒಂದು ಮತಕ್ಕೆ ಸಂಬಂಧವಿಲ್ಲ. ಯಾವ ಗ್ರಂಥವಾದರೂ ಅದು ಮತಗ್ರಂಥವಲ್ಲ. ಅದರಲ್ಲಿ ಮತ ನಿಯಮಗಳಿರುವುದಿಲ್ಲ. ಭಗವದ್ಗೀತೆಯಾಗಲೀ, ಬೈಬಲ್‌ಆಗಲೀ, ಖುರಾನ್ ಗ್ರಂಥವಾಗಲೀ ಮುಂದೆ ಹಿಂದೆ ತಯಾರಾಗಿರುವವೇ ಹೊರತು ಎಲ್ಲಾ ಸಮಾನ ಗ್ರಂಥಗಳೇ. ಮೂರು ಗ್ರಂಥಗಳು ಮನುಷ್ಯರಿಗೆ ಎಲ್ಲರಿಗೂ ಸಮಾನವಾಗಿ ಒಂದೇ ಜ್ಞಾನವನ್ನು ತಿಳಿಸುತ್ತಿವೆ ಆದರೇ ಸ್ವಲ್ಪವಾದರೂ ವ್ಯತ್ಯಾಸ ತೋರಿಸಲಿಲ್ಲ. ಮೂರು ಗ್ರಂಥಗಳು ಸಮಸ್ತ ಮಾನವರಿಗೆಂದು ಅರ್ಥವಾಗುವಂತೆ **"ಸಮಸ್ತ ಮಾನವರೇ!"** ಎಂದು ಗ್ರಂಥದಲ್ಲಿ ಸಂಬೋಧಿಸಿ ಹೇಳುವುದು ನಡೆದಿದೆ ಆದರೇ, ಎಲ್ಲೂ ಮತದ ಹೆಸರಿಟ್ಟು ಹೇಳಲಿಲ್ಲ. ಮತಕ್ಕೆ ಸಂಬಂಧವಿಲ್ಲದೇ ಒಂದು ಪಥಕ್ಕೆ ಸಂಬಂಧಿಸಿದ ಬೋಧನೆಯನ್ನು ಹೇಳುವುದಾಗಿದೆ. ಮನುಷ್ಯ ದೈವಗ್ರಂಥಗಳನ್ನು ನೋಡಿದ ನಂತರ ಅದರಲ್ಲಿನ ದೈವಪಥವನ್ನು (ದೈವಮಾರ್ಗ ವನ್ನು) ಗ್ರಹಿಸದೆ ಪಥವನ್ನು ಬಿಟ್ಟು ಮತವನ್ನು ಸ್ವತಃವಾಗಿ ತಯಾರಿಮಾಡಿ ಕೊಂಡಿದ್ದಾನೆ. ದೈವಮಾರ್ಗಕ್ಕೆ ಸಂಬಂಧಿಸಿದ ಜ್ಞಾನದ ಪ್ರಕಾರ ಮಾತನಾಡದೆ ಪ್ರಪಂಚ ಸಂಬಂಧವಾದ ಮತಕ್ಕೆ ಸಂಬಂಧಿಸಿ ಮಾತನಾಡುತ್ತಿದ್ದಾನೆ. ಯಾರಾದರೂ ಸಾಧಾರಣ ಮನುಷ್ಯರು ಮಾತನಾಡಿದರೇ ಅವರ ದಡ್ಡತನವೆಂದು ಸರಿಮಾಡಿಕೊಳ್ಳಬಹುದು. ಹಾಗಲ್ಲದೆ ಮೇಧಾವಿಗಳಾದವರು, ಅಷ್ಟೋ ಇಷ್ಟೋ ಜ್ಞಾನವಿದೆ ಎಂದು ಹೆಸರುಗಳಿಸಿದವರು ಕೂಡಾ ಪಥವನ್ನು ಬಿಟ್ಟು ಮತಕ್ಕೆ ಸಂಬಂಧಿಸಿದ ಮಾತುಗಳು ಮಾತನಾಡುವುದು ನೋಡಿದರೇ ಈದಿನ ಅಜ್ಞಾನ

ತಾರಕ್ಕೇರಿದೆಯೆಂದುಕೊಳ್ಳದೆ ತಪ್ಪುವುದಿಲ್ಲ. ಇಂತಹ ಸಮಯದಲ್ಲಿ **ದೇವರ ಕಡೆ ಇರುವವರು, ದೇವರ ಜ್ಞಾನ ತಿಳಿದವರು, ಮತಗಳ ಭೇದವಿಲ್ಲದ ಜ್ಞಾನಿಗಳು, ದೈವಗ್ರಂಥಗಳನ್ನು ಮೂರನ್ನು ಸಮಾನವಾಗಿ ನೋಡುವ ಸಮತುಲ್ಯಗಳು, ದೇವರ ಜ್ಞಾನವೇ ಉಸಿರಾಗಿ ಬದುಕುತ್ತಿರುವ ಯೋಗಿಗಳು, ಜ್ಞಾನಿಗಳು** ಎಲ್ಲರೂ ಸೇರಿ ದೈವಜ್ಞಾನದಲ್ಲಿನ ಇಂದಿನ ಕಾಲುಷಿತವನ್ನು ತೆಗೆದುಹಾಕಿ ಸ್ವಚ್ಛವಾದ ದೈವಜ್ಞಾನ ಪ್ರಜೆಗಳಿಗೆ ಒದಗಿಸಬೇಕಾದ ಅವಶ್ಯಕವಿದೆ.

**23) ಪ್ರಶ್ನೆ :– ಮಾತೃಭಾಷೆ ಎಂದರೇ ಭಾಷೆಗೆ ತಾಯಿಭಾಷೆಯೆಂದು ನಿರ್ಧಾರಿಸಿ ಹೇಳಿದ್ದೀರ. ಆದರೇ ಈದಿನ ಪ್ರಜೆಗಳಲ್ಲಿ ನೀವು ಹೇಳಿರುವ ವಿವರ ಏನೂ ತಿಳಿದಿಲ್ಲ. ಒಂದು ಗ್ರಂಥ ಮೊದಲು ಯಾವ ಭಾಷೆಯಲ್ಲಿ ತಯಾರಾಗಿದ್ದರೇ ಆ ಭಾಷೆಯನ್ನೇ ಮಾತೃಭಾಷೆ ಎಂದು ಗ್ರಂಥವನ್ನು ಅನುಸರಿಸಿ ಹೇಳುತ್ತಿದ್ದಾರೆ. ಇನ್ನು ಕೆಲವರು ಮನುಷ್ಯ ಹುಟ್ಟಿದ ನಂತರ ಮೊದಲು ಯಾವ ಭಾಷೆ ಕಲಿತು ಕೊಂಡಿದ್ದಾನೋ ಆ ಭಾಷೆಯನ್ನೇ ಮಾತೃಭಾಷೆ ಎಂದು ಹೇಳುತ್ತಿದ್ದಾರೆ. ಇಲ್ಲಿ ಮನುಷ್ಯನಿಗೆ ಮೊದಲು ಬಂದಿರುವ ಭಾಷೆಯನ್ನು ಮಾತೃಭಾಷೆ ಎನ್ನುವುದು ನಡೆಯುತ್ತಿದೆ. ನೀವೇನೋ ಒಂದು ಭಾಷೆ ಮತ್ತೊಂದು ಭಾಷೆಯಿಂದ ಹುಟ್ಟುತ್ತಿದೆ ಎಂದು ಯಾವ ಭಾಷೆಯಿಂದ ಎರಡನೆಯ ಭಾಷೆ ಹುಟ್ಟಿದೆಯೋ ಅದಕ್ಕೆ ಮೊದಲ ಭಾಷೆ ಮಾತೃಭಾಷೆ ಎಂದು ಹೇಳಿದ್ದೀರ. ಈಗ ಮೂರು ವಿಧಗಲ ಭಾವನೆಗಳು ಏರ್ಪಟ್ಟಿವೆ. ಇದರಲ್ಲಿ ಗ್ರಂಥವನ್ನು ಅನುಸರಿಸಿ ಹೇಳಿರುವುದು ಸತ್ಯವಾ? ನಮಗೆ ಮೊದಲು ಬಂದ ಭಾಷೆ ಸತ್ಯವಾ? ಅದೂ ಅಲ್ಲದೇ ಭಾಷೆ ಹುಟ್ಟುವಿಕೆಗೆ ಕಾರಣವಾದ ಭಾಷೆ ಮಾತೃಭಾಷೆ ಎನ್ನುವುದು ಸತ್ಯವಾ ಎಂಬ ಸಂಶಯ ಏರ್ಪಡುತ್ತಿದೆ? ಇದಕ್ಕೆ ನೀವೇನು ಹೇಳುವಿರಿ?**

**ಉತ್ತರ :–** ನಾನು ಹೇಳಿರುವುದು ಸಹಜವಾದ ಅರ್ಥ. ನಾನು ಹೇಳಿರುವ ವಿಧಾನವು ನಂತರ ಸ್ವಲ್ಪದಮಟ್ಟಿಗೆ ಒಪ್ಪಿಕೊಳ್ಳುವುದಕ್ಕೆ ಅವಕಾಶವಿದೆ. ಮನುಷ್ಯ ಮೊದಲು ಕಲಿತಿರುವ ಭಾಷೆಯನ್ನು ಮಾತೃಭಾಷೆಯೆಂದು ಹೇಳಬಹುದು. ಅದಕ್ಕಿಂತಲೂ ಬೇರೆಯಾಗಿ ಹೇಳಿರುವ ಗ್ರಂಥವನ್ನು ಯಾವ ಭಾಷೆಯಲ್ಲಿ

ಬರೆದಿದ್ದರೇ ಅದೇ ಮಾತೃಭಾಷೆಯೆಂದು, ಆ ಭಾಷೆಯಲ್ಲಿಯೇ ಆ ಗ್ರಂಥವನ್ನು ಓದಬೇಕೆಮದು ಹೇಳುವುದು ಆಧಾರವಿಲ್ಲದ ಅಹೇತುಕವಾದ ಮಾತಾಗುತ್ತದೆ. ಏಕೆಂದರೇ! ಗ್ರಂಥಕ್ಕೆ ಪ್ರಾಣವಿಲ್ಲ. ಮನುಷ್ಯರಿಗೆ ಬಂದ ಭಾಷೆಯಲ್ಲಿ ಬರೆದು ಅದು ಮನುಷ್ಯನಿಂದ ಬಂದಿರುವ ಭಾಷೆ ಎನ್ನದೇ, ಗ್ರಂಥದ ಭಾಷೆಯೆಂದು ಅದರಲ್ಲೇ ಓದಬೇಕೆಂದು ಹೇಳುವುದರಿಂದ, ಮನುಷ್ಯನಿಗೆ ಸಂಬಂಧಿಸಿದ ಭಾಷೆಯನ್ನು ದೊಡ್ಡದಾಗಿ ಮಾಡಿದಂತಾಗುತ್ತಿದೆ. ಮನುಷ್ಯನಿಗೆ ಬಂದಿರುವ ಭಾಷೆಯನ್ನು ಗ್ರಂಥದ ಮೇಲೆ ಬರೆದು ಅದೇ ಎಲ್ಲರಿಗೂ ಮಾತೃಭಾಷೆ ಆಗಬೇಕೆಂದು ಅಂದುಕೊಳ್ಳುವುದು ತನ್ನ ಭಾಷೆಯನ್ನು ಮನುಷ್ಯ ಇತರರ ಮೇಲೆ ಉಜ್ಜುವುದೇ ಹೊರತು ಏನೂ ಇಲ್ಲ. ಗ್ರಂಥದಲ್ಲಿನ ಭಾವನೆ ತಿಳಿಯುವುದು ಮುಖ್ಯವೇ ಹೊರತು ಭಾಷೆ ತಿಳಿಯುವುದು ಮುಖ್ಯವಲ್ಲ. ಒಂದು ವಿಧವಾಗಿ ಅರ್ಥವಾಗುವುದಕ್ಕೆ ಉದಾಹರಣೆ ಕೊಟ್ಟು ಹೇಳಿದರೇ ಹೀಗೆ ಹೇಳಬಹುದು. ಭಾಷೆ ಸ್ಥೂಲ ಶರೀರವಿದ್ದಹಾಗೆ. ಭಾವನೆ ಸೂಕ್ಷ್ಮ ಶರೀರದಂಥದ್ದು. ಭಾಷೆ ತಿಳಿದವನಿಗೆ ಆ ಭಾಷೆಯಲ್ಲಿ ಬರೆಯಲಾದ ಭಾವನೆ ಕೂಡಾ ತಿಳಿಯುತ್ತದೆ. ಒಂದು ವೇಳೆ ಭಾಷೆ ತಿಳಿದರೂ ಅದರಲ್ಲಿನ ಭಾವನೆ ತಿಳಿಯದೇ ಹೋದರೇ ಸೂಕ್ಷ್ಮವಿಲ್ಲದ ಸ್ಥೂಲವನ್ನು ಹಿಡಿದುಕೊಂಡಂತಾಗುವುದು. ಅಂದರೆ ಜೀವವಿಲ್ಲದ ಶರೀರವನ್ನು ಹಿಡಿದುಕೊಂಡಂತಾಗುವುದು. ಇನ್ನೊಂದು ವಿಧವಾಗಿ ಹೇಳಿದರೇ ಪ್ರಾಣವಿಲ್ಲದ ಶವವನ್ನು ಹಿಡಿದುಕೊಂಡಹಾಗೆ. ಮೇಲಿನ ಶರಿರ ಆಕಾರವು ಹೇಗಿದ್ದರೂ ಒಳಗಿನ ಪ್ರಾಣವು ಶರೀರಕ್ಕೆ ಮುಖ್ಯ. ಒಳಗಿನ ಪ್ರಾಣವಿಲ್ಲದ ಶರೀರವನ್ನು ಆಶ್ರಯಿಸಿದವನಿಗೆ ಯಾವ ಪ್ರಯೋಜನೆ ಹೇಗಿರುವುದಿಲ್ಲವೋ ಹಾಗೆಯೇ ಭಾವನೆ ಇಲ್ಲದ ಭಾಷೆ ಇರುತ್ತದೆ.

ನಾನು ದಂತ ವೈದ್ಯನಾಗಿ (ಡೆಂಟಲ್ ಡಾಕ್ಟರಾಗಿ) ಕೆಲಸಮಾಡುವ ಒಬ್ಬ ಮುಸ್ಲಿಮ್‌ನ್ನು "ನೀವು ಖುರಾನ್ ಗ್ರಂಥವನ್ನು ಓದಿದ್ದೀರಾ?" ಎಂದು ಕೇಳಿದೆನು. ಆಗ ಆತನು ಕೂಡಲೇ "ಓದಿದ್ದೇನೆ" ಎಂದನು. ಆಗ "ನಿನಗೆ ಚೆನ್ನಾಗಿ ಅರ್ಥವಾಯಿತಾ!" ಎಂದು ಕೇಳಿದೆನು. ಅದಕ್ಕೆ ಆತನು ನಿಧಾನವಾಗಿ

ನಕ್ಕು "ನಾನು ಓದಿದ್ದು ಅರಬ್ಬೀ ಭಾಷೆಯಲ್ಲಿ, ಅರಬ್ಬೀ ಭಾಷೆಯನ್ನು ಓದುವುದಕ್ಕೆ ಮಾತ್ರ ಕಲಿತುಕೊಂಡಿದ್ದೇನೆ. ಭಾಷೆ ಪೂರ್ತಿಯಾಗಿ ತಿಳಿದಿಲ್ಲ. ಕೇವಲ ಓದುವುದಕ್ಕೆ ಮಾತ್ರ ಲಿಪಿಯನ್ನು ಕಲಿಯುವುದರಿಂದ ಅದರಲ್ಲಿನ ಭಾವನೆ ಪೂರ್ತಿ ತಿಳಿದಿಲ್ಲ" ಎಂದನು. ಈ ವಿಧವಾಗಿ ಹೈದರಾಬಾದ್‌ನಲ್ಲಿ ಒಬ್ಬ ಡಾಕ್ಟರ್ ಹೇಳಿದರೇ, ನೆಲ್ಲೂರಿನಲ್ಲಿ ಒಬ್ಬ ಮುಸ್ಲಿಮ್ ಮಹಿಳೆಯನ್ನು ಕೇಳಿದಾಗ ಆಕೆ ಕೂಡಾ ಹಾಗೆಯೇ ಹೇಳಿದಳು. "ಪಂಡಿತರಿಗೇ ಅರಬ್ಬೀ ಭಾಷೆ ಅರ್ಥ ತಿಳಿದಿದೆ. ನಮಗೆ ಅರ್ಥ ತಿಳಿದಿಲ್ಲ. ಓದುವುದಕ್ಕೆ ಮಾತ್ರ ಕಲಿತುಕೊಂಡಿದ್ದೇವೆ" ಎಂದು ಹೇಳಿದ್ದಾರೆ. ಈ ವಿಧವಾಗಿ ನೋಡಿದರೇ ಅವರಿಗೆ ಮೇಲಿನ ಶರೀರ ದೊರೆತಿದೆ ಆದರೇ ಒಳಗಿನ ಪ್ರಾಣವಿರುವ ಶರೀರ ದೊರೆತಿಲ್ಲವೆಂದು ತಿಳಿಯಿತು. ಆಗ ಅದು ಗ್ರಂಥಕ್ಕೆ ಸಂಬಂಧಿಸಿದ ಇತರರ ಭಾಷೆಯೇ ಹೊರತು ವಾಸ್ತವವಾಗಿ ಗ್ರಂಥದೊಂದಿಗೆ ಹುಟ್ಟಿರುವ ಭಾಷೆಯಲ್ಲ. ಇದನ್ನು ಅನುಸರಿಸಿ ಮನುಷ್ಯನಿಗೆ ಮೊದಲು ಬಂದಿರುವ ಭಾಷೆಯನ್ನು ಮಾತೃಭಾಷೆಯೆಂದರೂ ತಪ್ಪಿಲ್ಲ ಆದರೆ ಗ್ರಂಥದಲ್ಲಿ ಬರೆದ ಭಾಷೆಯನ್ನು ಮಾತೃಭಾಷೆಯೆಂದು ಹೇಳಬಾರದು. ಮನುಷ್ಯನಿಗೆ ಬಂದ ಭಾಷೆಯೇ ಗ್ರಂಥವಾಗಿ ಬರೆಯುವುದರಿಂದ ಮನುಷ್ಯನಿಗೆ ಬಂದ ಭಾಷೆಯನ್ನು ಮಾತೃಭಾಷೆಯೆಂದು ಹೇಳುವುದರಲ್ಲಿ ತಪ್ಪಿಲ್ಲ. ಭಾಷೆಗೆ ತಾಯಿಯಾಗಿ ಬೇರೆ ಭಾಷೆಯಿದ್ದರೂ, ಮನುಷ್ಯನಿಗೆ ಬಂದ ಭಾಷೆ ಆ ಮನುಷ್ಯನಿಗೆ ತಾಯಿಯಂತಿದೆ. ಆದ್ದರಿಂದ ಮನುಷ್ಯ ತನಗೆ ತಾಯಿ ಭಾಷೆಯೆಂದು ಯಾವ ಭಾಷೆಯನ್ನು ಹೇಳಿದರೂ ಪರವಾಗಿಲ್ಲ ಆದರೇ, ಗ್ರಂಥಕ್ಕೆ ಮಾತೃಭಾಷೆ ಇರುವುದಿಲ್ಲ.

ಮನುಷ್ಯ ತನಗೆ ಬಂದ ಭಾಷೆಯಲ್ಲಿ ಗ್ರಂಥವನ್ನು ಓದುವುದನ್ನು ಮಾತೃಭಾಷೆಯಲ್ಲಿ ಓದುವುದೆಂದು ಹೇಳಬಹುದು. ಮನುಷ್ಯ ಒಂದು ಗ್ರಂಥವನ್ನು ಬರೆದ ಭಾಷೆಯಲ್ಲಾಗಲೀ, ಅನುವಾದ ಭಾಷೆಯಲ್ಲಾಗಲೀ ಓದಬಹುದು. ಗ್ರಂಥದಲ್ಲಿನ ಭಾಷೆ ಮನುಷ್ಯನಿಗೆ ಬಂದಾಗ ಓದಬಲ್ಲನು. ಅದೇ ಗ್ರಂಥವು ಬೇರೆ ಭಾಷೆಯಲ್ಲಿದ್ದರೇ ಓದುವುದು ಸಾಧ್ಯವಿಲ್ಲ. ಓದದಿದ್ದರೇ ಅದರಲ್ಲಿನ ಅರ್ಥ ತಿಳಿಯುವುದಿಲ್ಲ. ಭಾಷೆ ತಿಳಿದು ಓದಿದರೇ ಗ್ರಂಥದಲ್ಲಿನ ಭಾವನೆ

ಮನುಷ್ಯನಿಗೆ ಪೂರ್ತಿಯಾಗಿ ತಿಳಿಯುತ್ತಿದೆ. ಆದ್ದರಿಂದ ತಿಳಿಯದ ಭಾಷೆಯಲ್ಲಿನ ಗ್ರಂಥವನ್ನು ಓದುವುದಕ್ಕಿಂತಲೂ ತಿಳಿದ ಭಾಷೆಯಲ್ಲಿನ ಗ್ರಂಥವನ್ನು ಓದುವುದು ಉತ್ತಮ. 'ಪ್ರಾಣವಿಲ್ಲದ ಶವವನ್ನು ಆಶ್ರಯಿಸುವುದಕ್ಕಿಂತಲೂ ಪ್ರಾಣವಿರುವ ಮನುಷ್ಯನನ್ನು ಆಶ್ರಯಿಸುವುದು ಒಳಿತು' ಎಂದಂತೆ ಸಂಸ್ಕೃತ ಭಾಷೆಯಲ್ಲಿ ಭಗವದ್ಗೀತೆಯನ್ನು ಓದಿಕೊಂಡರೇ ತಿಳಿದ ಭಾಷೆಯಲ್ಲಿ ಯಾವುದರಲ್ಲಾದರೂ ಮನುಷ್ಯ ಗೀತೆಯನ್ನು ಓದಬಹುದು. ಮನುಷ್ಯ ಹುಟ್ಟಿದ ನಂತರ ಕಲಿತ ಭಾಷೆ ಒಂದೊಂದು ಪ್ರದೇಶದಲ್ಲಿ ಒಂದೊಂದಾಗಿದೆ. ಕರ್ನಾಟಕ ರಾಷ್ಟ್ರದಲ್ಲಿ ಅವರು ಕನ್ನಡ ಭಾಷೆ ಮೊದಲು ಕಲಿಯುವದರಿಂದ ಆ ಪ್ರಾಂತದವರಿಗೆಲ್ಲರಿಗೂ ಕನ್ನಡ ಭಾಷೆ ಮಾತೃಭಾಷೆಯಾಗುತ್ತದೆ. ಹಾಗೆಯೇ ಲಂಬಾಣಿ (ಬಂಜಾರಾ) ರವರಿಗೆ ಮೊದಲು ಬರುವುದು ಅವರ ಭಾಷೆಯಾಗಿರುವುದರಿಂದ ಅವರಿಗೆ ಮಾತೃಭಾಷೆ ಬಂಜಾರಾ ಭಾಷೆಯಾಗುತ್ತಿದೆ. ಹೀಗೆ ಎಲ್ಲ ಪ್ರದೇಶಗಳವರಿಗೆ ಭಾಷೆ ಇರುವುದರಿಂದ ಎಲ್ಲ ಪ್ರದೇಶಗಳವರಿಗೆ ಅವರ ಪ್ರಾಂತೀಯ ಭಾಷೆಗಳೇ ಅವರಿಗೆ ಮಾತೃಭಾಷೆಗಳಾಗಿ ಇವೆ. ಗ್ರಂಥವನ್ನು ಅನುಸರಿಸಿ ಮಾತೃಭಾಷೆಗಳು ಇರುವುದಿಲ್ಲ.

**24) ಪ್ರಶ್ನೆ :– ಪ್ರಾರ್ಥನೆ ಯಾವ ಭಾಷೆಯಲ್ಲಿ ಮಾಡಬೇಕು?**

**ಉತ್ತರ :–** ನಿನಗೆ ಬಂದ ಭಾಷೆಯಲ್ಲಾಗಲೀ, ನಿನಗೆ ಇಷ್ಟವಾದ ಭಾಷೆಯಲ್ಲಾಗಲೀ ಪ್ರಾರ್ಥನೆ ಮಾಡಬಹುದು.

**25) ಪ್ರಶ್ನೆ :– ಭಗವದ್ಗೀತೆ ಸಂಸ್ಕೃತ ಭಾಷೆಯಲ್ಲಿದೆ. ಖುರಾನ್ ಅರಬ್ಬೀ ಭಾಷೆಯಲ್ಲಿದೆ. ಭಗವದ್ಗೀತೆಯನ್ನಾಗಲೀ, ಖುರಾನ್ ಗ್ರಂಥವನ್ನಾಗಲೀ ಯಾವುದಾದರೂ ಅದು ತಯಾರಾದ ಭಾಷೆಯಲ್ಲಿಯೇ ಓದಬೇಕೆಂದು ಕೆಲವರು ಹೇಳುತ್ತಿದ್ದಾರೆ. ಇದನ್ನು ಕುರಿತು ನೀವು ಏನು ಹೇಳುವಿರಿ. ನಿಮ್ಮ ಭಾವನೆಯನ್ನು ತಿಳಿಸಿರೆಂದು ಕೋರುತ್ತಿದ್ದೇವೆ?**

**ಉತ್ತರ :–** ದೈವ ವಿಷಯಗಳೆಲ್ಲವೂ ಬ್ರಹ್ಮವಿದ್ಯಾ ಶಾಸ್ತ್ರಗಳಾದ ಭಗವದ್ಗೀತೆ,

ಬೈಬಲ್, ಖುರಾನ್ ಗ್ರಂಥಗಳಲ್ಲಿ ಇರುತ್ತವೆ. ಪ್ರಪಂಚ ವಿಷಯಗಳನ್ನು ಮನುಷ್ಯರು ಹೇಳುತ್ತಾರೆ. ದೈವ ವಿಷಯಗಳನ್ನು ದೇವರು ಹೇಳುತ್ತಾನೆ. ಈಗ ನೀನು ಕೇಳಿರುವುದು ದೈವ ವಿಷಯವನ್ನು. ಆದ್ದರಿಂದ ಈ ವಿಷಯವನ್ನು ಮೂರು ದೈವಗ್ರಂಥಗಳನ್ನು ನೋಡಿ ದೇವರು ಹೇಳಿದಂತೆ ನಡೆದುಕೊಳ್ಳಬೇಕು. ಈ ವಿಷಯದಲ್ಲಿ ಮನುಷ್ಯರ ಮಾತುಗಳು ಕೇಳಬಾರದು. ಮೂರು ಗ್ರಂಥಗಳಲ್ಲಿ ಪ್ರಾರ್ಥನೆ ಮಾಡೆಂದು ಇದೆ ಆದರೇ ಇಂತಹ ಭಾಷೆಯಲ್ಲಿಯೇ ಮಾಡಿರೆಂದು ಎಲ್ಲೂ ಹೇಳಲಿಲ್ಲ. ಆದರೇ ಮನುಷ್ಯರು ಆ ಮಾತುಗಳನ್ನು ಹೇಳುತ್ತಾ ಗ್ರಂಥವು ತಯಾರಾದ ಭಾಷೆಯಲ್ಲಿಯೇ ಪ್ರಾರ್ಥನೆ ಮಾಡಬೇಕೆಂದೂ, ಹಿಂದೂಗಳು ಭಗವದ್ಗೀತೆ ತಯಾರಾದ ಸಂಸ್ಕೃತ ಭಾಷೆಯಲ್ಲಿಯೇ ಪ್ರಾರ್ಥಿಸಬೇಕೆಂದೂ, ಮುಸ್ಲೀಮ್‌ರು ಖುರಾನ್ ತಯಾರಾದ ಅರಬ್ಬೀ ಭಾಷೆಯಲ್ಲಿಯೇ ನಮಾಜ್ ಮಾಡಬೇಕೆಂದು ಹೇಳುತ್ತಿದ್ದಾರೆ. ದೇವರ ಪ್ರಾರ್ಥನೆ ದೈವ ವಿಷಯವಾಗಿರುವುದರಿಂದ ದೇವರ ಮಾತನ್ನು ಕೇಳಬೇಕೆ ಹೊರತು, ಮನುಷ್ಯರ ಮಾತುಗಳನ್ನು ಕೇಳಬಾರದು. ಮನುಷ್ಯರ ಮಾತುಗಳನ್ನು ಬಿಟ್ಟು ದೇವರ ಭಾವನೆಯನ್ನು ಅನುಸರಿಸಬೇಕು.

(ಇಲ್ಲಿಯವರೆಗು ಮೂರು ಮತಗಳ ಸಂಬಂಧವಾಗಿ ನಾನು ಪ್ರಶ್ನೆಗಳನ್ನು ಕೇಳಿದ್ದೇನೆ. ಈ ಪ್ರಶ್ನೆಗಳಲ್ಲಿ ಕೆಲವು ಪ್ರಶ್ನೆಗಳಿಗೆ ನನಗೆ ಉತ್ತರ ತಿಳಿದರೂ ಪ್ರಜೆಗಳು ಜ್ಞಾನವಂತರಾಗುವುದಕ್ಕೆ ಕೇಳಿದ್ದೇನೆ. ನೀವು ಕೊಟ್ಟಿರುವ ಉತ್ತರಗಳು ಹೇತುಬದ್ಧವಾಗಿದ್ದು ನನಗೆ ತೃಪ್ತಿಯನ್ನು ಕೊಟ್ಟಿವೆ. ಈಗ ನನ್ನ ಸ್ವಂತ ಪ್ರಶ್ನೆಗಳನ್ನು ಕೇಳದೇ ಇದಕ್ಕು ಮೊದಲು ಇಬ್ಬರ ಮಧ್ಯೆ ನಡೆದ ಸಂವಾದಗಳಲ್ಲಿ ಒಂದುಕಡೆಯಿಂದ ಬಂದ ಮಾತುಗಳನ್ನು ಪ್ರಶ್ನೆಗಳಾಗಿ ಮಾಡಿ ಕೇಳಬೇಕೆಂದು ಕೊಂಡಿದ್ದೇನೆ. ಎರಡೂಕಡೆ ಮಾತನಾಡಿರುವವರು ಅತಿರಥ ಮಹಾರಥರೆ. ಇಬ್ಬರಲ್ಲಿನ ಮಾತುಗಳನ್ನಲ್ಲದೆ ಒಂದುಕಡೆಯಿಂದ ಬಂದವುಗಳನ್ನೇ ಪ್ರಶ್ನೆಗಳಾಗಿ ಕೇಳುತ್ತಿದ್ದೇನೆ. ಇಸ್ಲಾಮ್ ಮತದಲ್ಲಿ ದೊಡ್ಡ ಮನುಷ್ಯನಾದ ವ್ಯಕ್ತಿ, ಜ್ಞಾನಿಯೆಂದು ಹೆಸರುಗಳಿಸಿದ ವ್ಯಕ್ತಿ, ಕೆಲವರಿಗೆ ಬೋಧಕನಾಗಿರುವ ವ್ಯಕ್ತಿ, ಒಂದು ಇಸ್ಲಾಮ್

ಆಧ್ಯಾತ್ಮಿಕ ಸಂಸ್ಥೆಯನ್ನು ನಡೆಸುವ ವ್ಯಕ್ತಿ ಮಾತನಾಡಿದ ಧೋರಣಿಗೆ ಬಹುಶಃ ಯಾರೂ ಉತ್ತರ ನೀಡಲಿಲ್ಲವೆಂದು ಅಂದುಕೊಳ್ಳುತ್ತೇನೆ. ಅಂತಹ ವ್ಯಕ್ತಿ ಮಾತುಗಳಲ್ಲಿನ ಸತ್ಯಾಸತ್ಯವನ್ನು ನೀವು ಮಾತ್ರವೇ ನಿರ್ಣಯಿಸಿ ಹೇಳಬಲ್ಲಿರೆಂಬ ನಂಬಿಕೆಯಿಂದ ಕೇಳುತ್ತಿದ್ದೇನೆ. ನಿಮ್ಮ ದೃಷ್ಟಿಯಲ್ಲಿ ಆಧ್ಯಾತ್ಮಿಕ ಭಾವನೆ ಹೊರತು ಉಳಿದ ಭಾವನೆ ಇರುವುದಿಲ್ಲ, ಆದಕಾರಣ ಎದುರಿಗಿರುವವನು ಎಂಥವನಾದರೂ ಅವರನ್ನು ನೋಡದೇ ಅವರ ಜ್ಞಾನವನ್ನು ಮಾತ್ರ ನೋಡಬಲ್ಲ ನೀವು ಅವರ ಮಾತುಗಳಲ್ಲಿ ನ್ಯಾಯಾನ್ಯಾಯ, ಸತ್ಯಾಸತ್ಯವನ್ನು ನಿರ್ಣಯಿಸಿ ಹೇಳಬಲ್ಲಿರೆಂಬ ನಂಬಿಕೆಯಿಂದ ಈಗ ಪ್ರಶ್ನಿಸುತ್ತಿದ್ದೇನೆ. ಈ ವಿಧವಾಗಿ ಕೇಳುವುದು ಇಬ್ಬರ ಮಧ್ಯೆ ಮಾತುಗಳ ತಗಾದೆ ಇಟ್ಟು ತಮಾಷೆ ನೋಡಬೇಕೆನ್ನುವುದು ನನ್ನ ಉದ್ದೇಶವಲ್ಲ. ಈ ಚರ್ಚೆಯಲ್ಲಿನ ಉತ್ತರಗಳಿಂದ ಎಷ್ಟೋಜನ ಪ್ರಜೆಗಳು ನಿಮ್ಮ ಮೂಲಕ ಜ್ಞಾನವಂತರಾಗುತ್ತಾರೆಂದು ನಾವು ತಿಳಿಯುತ್ತಿದ್ದೇವೆ. ಇತರರ ಮಾತುಗಳನ್ನು ಪ್ರಶ್ನೆಗಳಾಗಿ ಕೇಳಿದಕ್ಕೆ ಕ್ಷಮಿಸಿರಿ.)

**26) ಪ್ರಶ್ನೆ :– ಮನುಷ್ಯ ದೇವರನ್ನು ವಿಶ್ವಾಶಿಸುವುದು ಎಂದರೇ ತನ್ನ ಇಷ್ಟಾಯಿಷ್ಟಗಳು ಬಿಡುವುದು ಮತ್ತು ದೇವರಿಗಾಗಿ ಜೀವಿಸುವುದು. ಆದರೇ ನಮಗೆ ಬಂದ ನಿರ್ಣಯಗಳು ದೈವಧರ್ಮಗಳು ಎಂದುಕೊಳ್ಳುವುದು ತಪ್ಪಲ್ಲವೇ! ಯಾರಾದರೂ ಮೂರು ಮತ ಧರ್ಮಗಳಲ್ಲಿ ತನಗಿಷ್ಟವಾದ ಧರ್ಮದ ಪ್ರಕಾರ ಜೀವಿಸಬಹುದು ಆದರೇ ಅದರ ನಿಯಮಗಳಲ್ಲಿ ಬದಲಾವಣೆ ಮಾಡಬೇಕು ಅಂದುಕೊಳ್ಳುವುದು ತಪ್ಪಲ್ಲವೇ! ಇದು ಇಸ್ಲಾಮ್‌ನಲ್ಲಿ ಆನೆಯಂತಹ ವ್ಯಕ್ತಿಯೊಬ್ಬರ ಅಭಿಪ್ರಾಯ. ನೀವು ಮೂರು ಮತಗಳಲ್ಲಿ ಯಾರದು ತಪ್ಪಾದರೂ ತಪ್ಪನ್ನು ತಪ್ಪಾಗಿ ಹೇಳುವುದು ಒಪ್ಪನ್ನು ಒಪ್ಪಾಗಿ ಹೇಳುವುದು ನಿಮ್ಮ ಪ್ರವೃತ್ತಿ. ದೇವರ ವಿಷಯದಲ್ಲಿ ದೈವಗ್ರಂಥಗಳ ಅನುಸಾರ ತೀರ್ಪು ಹೇಳುವ ನೀವು ಈ ವಿಷಯದಲ್ಲಿ ಇಲ್ಲಿ ಹೇಳಿರುವ ಮುಸ್ಲಿಮ್ ಹಿರಿಯನೊಬ್ಬನ ಉದ್ದೇಶ ಸರಿಯಾದುದೇನಾ? ಎಂದು ಕೇಳುತ್ತಿದ್ದೇನೆ. ಇದಕ್ಕೆ ನೀವೇನು ಹೇಳುತ್ತೀರಿ?**

**ಉತ್ತರ :–** ಉತ್ತರ ಹೇಳುವವನಿಗಿಂತಲೂ ಪ್ರಶ್ನೆ ಕೇಳುವವನೇ ಮೇಧಾವಿ

ಯಾಗಿರುತ್ತಾನೆಂದು ಹಿರಿಯರು ಹೇಳುತ್ತಿರುತ್ತಾರೆ. ಹಾಗೆಯೇ ಈ ಪ್ರಶ್ನೆಗೆ ನಿನಗೆ ಉತ್ತರ ತಿಳಿದಿರುತ್ತದೆ ಆದರೂ ನೀನು ನನ್ನ ಮುಖಾಂತರವೇ ತೆಗೆದುಕೊಳ್ಳಬೇಕೆಂದು ಪ್ರಯತ್ನಿಸುತ್ತಿದ್ದೀರ. ಸರೇ! ನೀನು ಕೇಳಿರುವುದಕ್ಕೆ ನಾನು ಯಾಕೆ ಉತ್ತರ ಹೇಳಬಾರದು. ತಪ್ಪದೇ ಹೇಳುತ್ತೇನೆ ಶ್ರದ್ಧೆಯಿಂದ ಕೇಳು! ದೇವರನ್ನು ವಿಶ್ವಾಶಿಸುವುದು ಎಂದರೇ ದೇವರಿಗಾಗಿ ಬದುಕಿದಹಾಗೆಯೇ ಎನ್ನುವುದು ಒಳ್ಳೆಯದೇ. ಆದರೇ ಇಷ್ಟಾಯಿಷ್ಟಗಳನ್ನು ಬಿಡುವುದೆಂದು ಹೇಳುವುದರಲ್ಲಿ ಸ್ವಲ್ಪ ಅಜ್ಞಾನ ಕಾಣಿಸುತ್ತಿದೆ. ಮನುಷ್ಯನಿಗೆ ಇಷ್ಟಾಯಿಷ್ಟಗಳಿದ್ದರೂ ಅವು ಕರ್ಮವನ್ನು ಅನುಸರಿಸಿ ನಡೆಯುತ್ತಿರುತ್ತದೆ. ಮೊದಲೇ ನಿರ್ಣಯಿಸಿರುವ ಮೊದಲೇ ಕರ್ಮಪತ್ರದಲ್ಲಿ ಬರೆದಿಟ್ಟಿರುವ ಕರ್ಮಪ್ರಕಾರ ಮನುಷ್ಯನೊಬ್ಬನ ಇಷ್ಟಾಯಿಷ್ಟಗಳ ಪ್ರಮೇಯವಿಲ್ಲದೇ ಕೆಲಸಗಳು ನಡೆಯುತ್ತಿರುತ್ತವೆ. ಆಗ ಬಿಟ್ಟರೂ ಬಿಡದೆ ಹೋದರೂ ಒಂದೇ ಆಗುತ್ತದೆ. ಜ್ಞಾನ ತಿಳಿಯದ ಮುನ್ನ ಮನುಷ್ಯನಿಗೆ ಇಷ್ಟಾಯಿಷ್ಟಗಳಿರುತ್ತವೆ. ಜ್ಞಾನ ತಿಳಿದ ನಂತರ ಅವು ತಾನು ಅಂದುಕೊಂಡಿರುವ ಪ್ರಕಾರ ನಡೆಯುವುದಿಲ್ಲವೆಂದು ತಿಳಿದು ಅವುಗಳ ವ್ಯಾಮೋಹವನ್ನು ಮನುಷ್ಯನು ಬಿಟ್ಟುಹಾಕುತ್ತಾನೆ. ದೇವರ ವಿಶ್ವಾಸ ಇರುವ ಮನುಷ್ಯ ದೇವರ ಜ್ಞಾನ ತಿಳಿದವನಾಗುತ್ತಾನೆ. ದೇವರ ಜ್ಞಾನ ತಿಳಿದಿರುವವನಿಗೆ ಇಷ್ಟವಿದ್ದರೂ ಇಷ್ಟವಿಲ್ಲದಿದ್ದರೂ ಯಾವುದು ನಡೆಯಬೇಕೋ ಅದೇ ನಡೆಯುವುದೆಂದು ತಿಳಿದಿರುತ್ತದೆ. ಆದ್ದರಿಂದ ಅಜ್ಞಾನಿಗೆ ಇರುವಹಾಗೆ ಜ್ಞಾನಿಗೆ ಇಷ್ಟವಿರುವುದಿಲ್ಲ, ಅಯಿಷ್ಟ ಇರುವುದಿಲ್ಲ. ಎರಡನೆಯ ವಿಷಯಕ್ಕೆ ಬಂದರೇ "ನಮಗೆ ಇಷ್ಟವಾದ ನಿರ್ಣಯಗಳು ದೈವ ಧರ್ಮಗಳೆಂದುಕೊಳ್ಳುವುದು ತಪ್ಪಲ್ಲವೇ!" ಎಂದು ಹೇಳಿದ್ದಾರೆ.

ಮನುಷ್ಯನ ಶರೀರದೊಳಗಿನಿಂದ ಬರುವ ನಿರ್ಣಯಗಳು ದೈವಧರ್ಮಗಳಲ್ಲ. ಒಂದುವೇಳೆ ಹಾಗೆ ಅಂದುಕೊಳ್ಳುವುದಿದ್ದರೇ ಅದು ತಪ್ಪೇ ಆಗುತ್ತದೆ. ದೈವ ಧರ್ಮಗಳು ದೇವರ ಗ್ರಂಥಗಳ ಮೂಲಕ ತಿಳಿಯುತ್ತದೆ. ಇಲ್ಲದೇ ಹೋದರೇ ದೇವರು ಅವತರಿಸಿ ಬೋಧಿಸಿರುವ ಬೋಧನೆಯಿಂದ ತಿಳಿಯುತ್ತದೆ.

ಅಂದರೇ ದೇವರು ಭಗವಂತನಾಗಿ ಹುಟ್ಟಿ ಅಧರ್ಮಗಳನ್ನು ಇಲ್ಲದೇ ಮಾಡಿ, ಧರ್ಮಗಳನ್ನು ಪ್ರತಿಷ್ಠಿಸಿದಾಗ ಧರ್ಮಗಳು ತಿಳಿಯುತ್ತವೆ. ಮನುಷ್ಯನಿಗೆ ಇಷ್ಟವಾದ ನಿರ್ಣಯಗಳು ಧರ್ಮಗಳೆನ್ನುವುದಕ್ಕೆ ಅವಕಾಶವಿಲ್ಲ. ಆದರೇ ಇಲ್ಲಿ ಕೇಳಿರುವ ವ್ಯಕ್ತಿ ಮುಸ್ಲಿಮ್ ಎಂದು ಮೊದಲೇ ತಿಳಿದಿದೆ ಆದ್ದರಿಂದ ಅವರು 'ದೇವರು ಅವತರಿಸುತ್ತಾನೆ' ಎಂದು ನಂಬುವುದಿಲ್ಲ. ದೇವರು ಅವತರಿಸುತ್ತಾನೆ ಎಂದು ನಂಬದೆ ಹೋಗುವುದು ಅದು ಮನುಷ್ಯನ ನಿರ್ಣಯವೇ ಆಗುತ್ತದೆ ಅಲ್ಲವೇ! ಪ್ರಥಮ ದೈವಗ್ರಂಥ ಗೀತೆಯಲ್ಲಿಯೂ, ಅಂತಿಮ ದೈವಗ್ರಂಥ ಖುರಾನ್‌ನಲ್ಲಿಯೂ ಬಹಳಕಡೆಗಳಲ್ಲಿ **"ದೇವರು ಅವತರಿಸುತ್ತಾನೆ"** ಎಂದು ಹೇಳಿದ್ದರೂ ಅದನ್ನು ಪಕ್ಕಕ್ಕಿಟ್ಟು ಮನುಷ್ಯರ ನಿರ್ಣಯವಾದ "ದೇವರು ಅವತರಿಸುವುದಿಲ್ಲ" ಎಂಬ ಮಾತನ್ನೇ ಸಮರ್ಥಿಸುವುದು ತಪ್ಪಲ್ಲವೇ! ಇನ್ನು "ಯಾವ ಮತ ಧರ್ಮದ ಪರಕಾರವಾದರೂ ಮನುಷ್ಯ ಜೀವಿಸಬಹುದು ಆದರೇ ಅದರ ನಿಯಮಗಳಲ್ಲಿ ಬದಲಾವಣೆ ಮಾಡಬೇಕು ಎಂದುಕೊಳ್ಳುವುದು ತಪ್ಪಲ್ಲವೇ!" ಎಂದಿದ್ದಾರೆ.ಇದರ ವಿಷಯವಾಗಿ ಮಾತನಾಡಿದರೇ ಯಾರಾದರೂ ತನಗೆ ಇಷ್ಟವಾದ ಧರ್ಮದ ಪ್ರಕಾರ ಜೀವಿಸಬಹುದು ಎಂದಾಗ ಧರ್ಮಗಳನ್ನು ಎರಡಾಗಿ ಸೀಳಿಸಿ ಆ ಎರಡರಲ್ಲಿ ಮನುಷ್ಯ ಯಾವ ಧರ್ಮದ ಪ್ರಕಾರ ಜೀವಿಸಬೇಕೆಂದುಕೊಂಡಿದ್ದಾನೋ ನೋಡಬೇಕು. ಧರ್ಮಗಳಲ್ಲಿ ದೇವರ ಧರ್ಮಗಳಿವೆ, ಪ್ರಪಂಚ ಧರ್ಮಗಳಿವೆ. ಪ್ರಪಂಚ ಧರ್ಮಗಳನ್ನು ಪ್ರಕೃತಿ ಧರ್ಮಗಳೆಂದು ಕೂಡಾ ಹೇಳಬಹುದು. ದೇವರ ಧರ್ಮಗಳು ಎಂದಿಗೂ ಬದಲಾಗುವವಲ್ಲ. ಒಬ್ಬರು ಬದಲಾಯಿಸಿದರೆ ಬದಲಾಗುವುದಿಲ್ಲ. ಪ್ರಕೃತಿ ಧರ್ಮಗಳಾದರೇ ಬದಲಾಗಬಲ್ಲವು. ಮನುಷ್ಯರು ಬದಲಾಯಿಸಬಹುದು. ಪ್ರಕೃತಿ ಧರ್ಮಗಳೆಲ್ಲವೂ ಮಾನವನ ಕರ್ಮವನ್ನು ಅನುಸರಿಸಿ ನಡೆಯುತ್ತಿರುತ್ತವೆ. ದೇವರ ಧರ್ಮಗಳು ಬದಲಾಗುವುದಿಲ್ಲ, ಯಾರೂ ಬದಲಾಯಿಸಲಾರರು. ದೇವರ ಧರ್ಮಗಳನ್ನು ಬದಲಾಯಿಸಬೇಕೆಂಬ ಊಹೆ ಕೂಡಾ ಯಾರಿಗೂ ಬರುವುದಿಲ್ಲ. ಏಕೆಂದರೇ! ಮಾನವನ ಅಂದಾಜಿಗೆ ಮೀರಿರುವುದು ದೇವರ ಧರ್ಮಗಳು. ನಿಮ್ಮ ಪ್ರಶ್ನೆಯಲ್ಲಿ ಯಾವ ಧರ್ಮಗಳನ್ನು ಕುರಿತು ಕೇಳಿದ್ದೀರೋ? ಒಂದುಬಾರಿ ನೋಡಿಕೊಳ್ಳಿ. ನೀವು ಕೇಳಿರುವುದು

ಮತ ಧರ್ಮಗಳನ್ನು ಕುರಿತು, ಮೂರು ಮತ ಧರ್ಮಗಳಲ್ಲಿ ನಿಮಗಿಷ್ಟವಾದ ಯಾವ ಧರ್ಮದಲ್ಲಾದರೂ ಜೀವಿಸಬಹುದು ಆದರೇ, ಧರ್ಮಗಳ ನಿಯಮಗಳನ್ನು ಬದಲಾಯಿಸಬೇಕೆಂದುಕೊಳ್ಳುವುದು ತಪ್ಪಲ್ಲವೇ ಎಂದು ಕೇಳಿದ್ದಾರೆ. ನೀವು ಕೇಳಿರುವ ಧರ್ಮಗಳು ದೈವಧರ್ಮಗಳನ್ನಲ್ಲ, ಪ್ರಪಂಚ ಸಂಬಂಧ ಧರ್ಮಗಳೆಂದು ತಿಳಿಯುತ್ತಿದೆ. ದೈವ ಧರ್ಮಗಳಲ್ಲಿ ಮತಧರ್ಮಗಳಿರುವುದಿಲ್ಲ. ಮೊದಲಿಗೆ ಮತವೆನ್ನುವುದು ದೈವಿಕವಲ್ಲದ ವಿಷಯ. ಮತವೊಂದರ ಪ್ರತಿಪಾದನೆಯ ಮೇಲೆ ದೇವರ ಧರ್ಮಗಳಿರುವುದಿಲ್ಲ. ಮತವೆನ್ನುವುದರಲ್ಲಿ ನಿಯಮಗಳಿರುತ್ತವೆ ಆದರೇ, ದೇವರ ಧರ್ಮಗಳಲ್ಲಿ ನಿಯಮಗಳಿರುವುದಿಲ್ಲ. ಎಲ್ಲಾ ಶಾಸನಗಳೇ ಇರುತ್ತವೆ. ದೇವರು ಹೇಳಿರುವ ಧರ್ಮವು ಸ್ವಲ್ಪವಾದರೂ ಪ್ರಪಂಚ ಸಂಬಂಧವಿರುವುದಿಲ್ಲ. ಚೆನ್ನಾಗಿ ಹೇಳಿದರೇ ಶರೀರದ ಹೊರಗೆ ಏನೂ ಸಂಬಂಧವಿರುವುದಿಲ್ಲ. ದೇವರ ಧರ್ಮವು ಯಾವುದಾದರೂ ಶರೀರಾಂತರ್ಗತವಾಗಿಯೇ, ಶರೀರ ಪರಿಧಿಯಲ್ಲಿಯೇ ಇರುತ್ತದೆ ಆದರೇ **ಶರೀರ ಪರಿಧಿ ದಾಟಿರುವುದು ದೇವರ ಧರ್ಮವಲ್ಲ**. ದೇವರ ಧರ್ಮಕ್ಕೆ ಹೊರಗಿನ ನಿಯಮಗಳಿರುವುದಿಲ್ಲ.

ಹೊರಗಿನ ಧರ್ಮದ ಪ್ರಕಾರ ಹಿಂದೂಗಳಿಗೆ, ಕ್ರೈಸ್ತರಿಗೆ, ಮುಸ್ಲೀಮ್‌ರಿಗೆ ಬೇರೆಬೇರೆ ಧರ್ಮಗಳು, ಬೇರೆಬೇರೆ ನಿಯಮಗಳು ಇರುವುದು ವಾಸ್ತವವೇ. ಮತ ನಿಯಮಗಳನ್ನೇ ಮತ ಧರ್ಮಗಳೆಂದು ಹೇಳುತ್ತಿದ್ದಾರೆ. ಉದಾಹರಣೆಗೆ **ಹಿಂದೂಗಳಲ್ಲಿ ಕಾಷಾಯ ವಸ್ತ್ರಗಳು ಧರಿಸುವುದು, ಜುಟ್ಟು, ಗಡ್ಡ ಬೆಳೆಸುವುದು ಹಿಂದೂ ಸನ್ಯಾಸಿಗಳ ನಿಯಮ. ಹಾಗೆಯೇ ಸಂಸ್ಕೃತದಲ್ಲಿ ಓದುವುದು, ಪ್ರಾರ್ಥನೆ ಮಾಡುವುದು ಎಂಬ ನಿಯಮವಿದೆ.** ಅವುಗಳನ್ನು ಬದಲಾಯಿಸಬೇಕೆಂದು ಕೊಳ್ಳುವುದು ಮತಕ್ಕೆ ಸಂಬಂಧಿಸಿದ ತಪ್ಪಾಗುತ್ತದೆ ಆದರೇ ದೇವರಿಗೆ ಸಂಬಂಧಿಸಿದ ತಪ್ಪಲ್ಲ. ಮತ ಸಂಬಂಧವಾದ ನಿಯಮಗಳ ಮೂಲಕ ದೇವರು ತಿಳಿಯುವುದಿಲ್ಲ. ದೇವರ ಜ್ಞಾನ ತಿಳಿಯುವುದಿಲ್ಲ. **ಮುಸ್ಲಿಮ್ ಮತದೊಳಗೆ ಬಂದರೇ ಮುಖ್ಯವಾಗಿ ನಮಾಜ್ ಮಾಡುವುದು, ಖುರಾನ್ ಗ್ರಂಥವನ್ನು ಓದುವುದು ಅರಬ್ಬೀ**

**ಭಾಷೆಯಲ್ಲಿಯೇ ನಡೆಯಬೇಕೆಂಬ ನಿಯಮವಿದೆ.** ಕೆಲವರು ಅರಬ್ಬೀ ದೇಶದಲ್ಲಿ ಹುಟ್ಟದೆ ಇರುವುದರಿಂದ, ಇತರ ದೇಶಗಳಲ್ಲಿ ಇರುವುದರಿಂದ ಅವರಿರುವ ಆ ದೇಶ ಭಾಷೆಯೊಂದಿಗೆಯೇ ಪರಿಚಯವಿರುತ್ತದೆ. ಅರಬ್ಬೀ ಭಾಷೆ ಸ್ವಲ್ಪವೂ ತಿಳಿಯದಿರುವುದರಿಂದ ಅವರು ಜನ್ಮತಹ ಮುಸ್ಲಿಮ್‌ರಾದರೂ, ಅವರಿಗೆ ಅರಬ್ಬೀ ಭಾಷೆ ಬರದೇ ಇರುವುದರಿಂದ ತಮಗೆ ಬಂದ ಭಾಷೆಯಲ್ಲಿಯೇ ಖುರಾನ್ ಗ್ರಂಥವನ್ನು ಓದಬೇಕೆಂದು ಅಂದುಕೊಳ್ಳುವುದು ಆ ಮತವೊಂದರ ನಿಯಮವನ್ನು ಪಾಲಿಸಿದಂತಾಗುತ್ತದೆ. ಅಷ್ಟೇ ಅಲ್ಲದೆ ಅರಬ್ಬೀ ಭಾಷೆಯಲ್ಲಿಯೇ ಆ ನಿಯಮವನ್ನು ಬದಲಾಯಿಸಿದಂತಾಗುತ್ತದೆ. ಆದ್ದರಿಂದ ಮತನಿಯಮಗಳಲ್ಲಿ ಬದಲಾವಣೆ ಮಾಡಬೇಕು ಅಂದುಕೊಳ್ಳುವುದು ತಪ್ಪಲ್ಲವೇ! ಎಂದು ಕೇಳುತ್ತಿದ್ದಾರೆ.

ಇದಕ್ಕೆ ನನ್ನ ಕಡೆಯಿಂದ ಬರುವ ಸಮಾಧಾನ ಏನೆಂದರೇ! **ಮನುಷ್ಯ ದೇವರ ಜ್ಞಾನವನ್ನು ತಿಳಿಯುವ ಸಲುವಾಗಿ ಯಾವ ತ್ಯಾಗಕ್ಕಾದರೂ ಸಿದ್ಧವಾಗಬೇಕು.** ದೇವರಕಡೆ ಹೋಗುವುದಕ್ಕೆ ಪ್ರಪಂಚ ಸಂಬಂಧವಾದ ಮತ ನಿಯಮಗಳನ್ನು ಅತಿಕ್ರಮಿಸಿದರೂ ಪರವಾಗಿಲ್ಲ. ಮತನಿಯಮಗಳನ್ನು ಬದಲಾಯಿಸಿದರೂ ಪರವಾಗಿಲ. ಮತವು ಪ್ರಪಂಚ ಸಂಬಂಧವಾದಾಗ ಮನುಷ್ಯನಿಗೆ ದೇವರ ಮಾರ್ಗವೇ ಮುಖ್ಯ ಆದರೇ ಮತಮಾರ್ಗವು ಮುಖ್ಯವಲ್ಲ. ದೈವಗ್ರಂಥಗಳಲ್ಲಿ ಸರ್ವ ಮಾನವರು ಒಂದೇಯೆಂದು ಇದೆ. ದೇವರು ಎಲ್ಲರಿಗೂ ಒಬ್ಬನೇ. ದೇವರು ತನ್ನ ಗ್ರಂಥದಲ್ಲಿ ಪಥವನ್ನು ತೋರಿಸಿದ್ದಾನೆ ಹೊರತು, ಮತವನ್ನು ತೋರಿಸಲಿಲ್ಲ. ಮತವನ್ನು, ಮತ ನಿಯಮಗಳನ್ನು ಮನುಷ್ಯರು ಸೃಷ್ಟಿಸಿಕೊಂಡಿದ್ದಾರೆಯೇ ಹೊರತು ದೇವರು ಸೃಷ್ಟಿಸಲಿಲ್ಲ. ಮತವು ಮತ್ತಿನ ಔಷಧಿಯಂಥದ್ದು. ಅದರ ಚಟಕ್ಕೆ ಬಿದ್ದವನು ಅದಕ್ಕೆ ಪೂರ್ತಿಯಾಗಿ ಗುಲಾಮನಾಗಿ ಹೋಗುತ್ತಿದ್ದಾನೆ. ದೇವರ ಅಧರ್ಮಗಳಲ್ಲಿ ಯಾವ ಮತವಾದರೂ, ಯಾವ ಮತಧರ್ಮವಾದರೂ, ಯಾವ ಮತನಿಯಮವಾದರೂ ಸೇರಿಹೋಗಿವೆ. ಪೂರ್ವವು **ದ್ವಾಪರಯುಗದವರೆಗು ನಾಲಕ್ಕು ಅಧರ್ಮಗಳು ಮಾತ್ರವೇ ಇದ್ದವು. ಪ್ರಸ್ತುತ ಕಲಿಯುಗದಲ್ಲಿ ಹೊಸದಾಗಿ ಐದನೆಯ ಅಧರ್ಮವು**

**ಬಂದು ಸೇರಿದೆ.** ಪೂರ್ವದಿಂದ **ಇರುವ ಯಜ್ಞ, ದಾನ, ವೇದ, ತಪಸ್ಸುಗಳು ಅಧರ್ಮಗಳಾಗಿದ್ದು** ಅವು ಮಾನವನನ್ನು ದೇವರಿಗೆ ದೂರವಾಗಿ ತೆಗೆದುಕೊಂಡು ಹೋಗುವವು. ಅವುಗಳನ್ನು ಅಡಗಿಸಿ ತನ್ನ ಧರ್ಮಗಳನ್ನು ತಿಳಿಸಿ, ಮಾನವನನ್ನು ತನ್ನಕಡೆ ಬರುವುದಕ್ಕೆ ದೇವರು ದೈವಮಾರ್ಗವನ್ನು ಏರ್ಪಡಿಸಿದ್ದಾನೆ. ಆದರೇ ಈದಿನ ಹೊಸದಾಗಿ ಐದನೆಯ ಅಧರ್ಮ ಬಂದಿರುವುದರಿಂದ ದೇವರು ತನ್ನ ಪ್ರತಿನಿಧಿ ರೂಪದಲ್ಲಿ ಭಗವಂತನಾಗಿ ಭೂಮಿಮೇಲೆ ಬಂದು, **ಮತವೆಂಬ ಅಧರ್ಮವನ್ನು** ತಗ್ಗಿಸಬೇಕಾದ ಅಗತ್ಯವಿದೆ. ಇಲ್ಲದೇ ಹೋದರೇ ದೇವರು ಹೇಳಿರುವ ದೈವಗ್ರಂಥಗಳಲ್ಲಿನ ವಿಷಯಗಳನ್ನು ಕೂಡಾ ಲೆಕ್ಕ ಮಾಡದ ಸ್ಥಿತಿಗೆ ಮನುಷ್ಯನನ್ನು ಮತವು ಬದಲಾಯಿಸಿದೆ. ದೇವರ (ಅಲ್ಲಾಹ್) ಆಯತ್‌ಗಳಿಗೇ ಬೆಲೆ ಇಲ್ಲದಂತೆ ಮಾಡಿ, ಆಯತ್‌ನಲ್ಲಿ ಹೇಳಿರುವ ಮಾತನ್ನು ಕೇಳದೇ ಮತ ಹೇಳಿರುವ ಮಾತನ್ನು ಕೇಳುವಂತೆ ಮನುಷ್ಯನನ್ನು ಬದಲಾಯಿಸಿಬಿಟ್ಟಿದೆ. ಒಂದುಕಡೆ ನಮ್ಮ ಗ್ರಂಥವೆಂದು ಹೇಳುತ್ತಿದ್ದರೂ, ನಮ್ಮ ಗ್ರಂಥದಲ್ಲಿ ಎಷ್ಟೋ ದೊಡ್ಡ ಜ್ಞಾನವಿದೆ ಎಂದು ಹೇಳುತ್ತಿದ್ದರೂ, ಮನುಷ್ಯ ಕೊನೆಗೆ ಗ್ರಂಥದಲ್ಲಿ ಹೇಳಿರುವ ವಾಕ್ಯವನ್ನು ಕೂಡಾ ಲೆಕ್ಕಿಸದ ಸ್ಥಿತಿಗೆ ಸೇರಿಕೊಂಡಿದ್ದಾನೆ. ಉದಾಹರಣೆಗೆ ಹೇಳಿದರೇ ಖುರಾನ್ ಗ್ರಂಥದಲ್ಲಿ 15ನೇ ಸೂರಾದಲ್ಲಿ, 28 ರಿಂದ 31ರ ವರೆಗು ಇರುವ ವಾಕ್ಯಗಳನ್ನು ನೋಡಿದರೇ ಮನುಷ್ಯನೊಂದರ ಸ್ಥಿತಿ ಈದಿನ ಹೇಗಿದೆಯೋ ತಿಳಿಯುತ್ತದೆ.

**(15-28,29,30,31) "ನಿನ್ನ ಪ್ರಭು ದೇವದೂತರೊಂದಿಗೆ ಹೀಗೆ ಹೇಳಿದ ವಿಷಯವು ಜ್ಞಾಪಕ ಮಾಡಿಕೋ! 'ನಿಶ್ಚಯವಾಗಿ ಮೊಳಗುವ ಮಣ್ಣು, ರೂಪಾಂತರ ಪಡೆದಿರುವ ಜಿಗುಟಾದ ಬುರದೆಯಿಂದ ನಾನು ಒಬ್ಬ ಮಾನವನನ್ನು ಸೃಷ್ಟಿಸುತ್ತಿದ್ದೇನೆ. ಇನ್ನು ನಾನು ಆತನಿಗೆ ಪೂರ್ತಿಯಾಗಿ ಆಕಾರಕೊಟ್ಟು ಆತನಲ್ಲಿ ನನ್ನ ಆತ್ಮನನ್ನು ಊದಿದಾಗ ನೀವೆಲ್ಲಾ ಆತನ ಮುಂದೆ ಸಾಷ್ಟಾಂಗ ಬೀಳಿರಿ. ದೇವದೂತರೆಲ್ಲರೂ ಸಾಷ್ಟಾಂಗ ಬಿದ್ದಿದ್ದಾರೆ. ಒಬ್ಬ ಇಬ್ಲೀಸು ಮಾತ್ರ ಸಾಷ್ಟಾಂಗ ಬೀಳಲಿಲ್ಲ".**

ದೇವರು ಮನುಷ್ಯನ ಆಕಾರವನ್ನು ಮಾಡಿ ಅದರಲ್ಲಿ ತನ್ನ ಆತ್ಮನನ್ನೇ ಊದಿ ತನ್ನ ಪ್ರತಿನಿಧಿಯನ್ನು ಕಳುಹಿಸಿದಾಗ ಇಬ್ಲೀಸು (ಮಾಯೆಯೊಂದಿಗೆ) ಕೂಡಿಕೊಂಡಿರುವವರು ಕೈ ಮುಗಿಯಲಿಲ್ಲ.

ಇಲ್ಲಿ ಹೇಳಿರುವ ವಾಕ್ಯಗಳಲ್ಲಿ ದೇವರು ಧರ್ಮಸಂಸ್ಥಾಪನೆಗಾಗಿ ಭೂಮಿ ಮೇಲೆ ಮನುಷ್ಯನ ಆಕಾರದಲ್ಲಿ ಬಂದಾಗ ದೇವರು ತನ್ನ ಪ್ರತಿನಿಧಿಯನ್ನು ತಾನೇ ಕಳುಹಿಸಿದಂತೆ ಹೇಳಿದರೂ ಬಂದವನು, ಹೇಳಿರುವವನು ಒಬ್ಬನೇ ಎಂದು ತಿಳಿಯದೇ ಮಾಡಿದ್ದಾರೆ. ದೇವರು ತಿಳಿಯದೇ ಮಾಡಿದ ತನ್ನ ಪ್ರತಿನಿಧಿ ಬಂದಾಗ ದೇವದೂತರೆಲ್ಲರೂ ಬಂದವನನ್ನು ಗುರುತಿಸಿ ಸಾಷ್ಟಾಂಗ ನಮಸ್ಕಾರ ಮಾಡಿದ್ದಾರೆ. ಆದರೇ ಮಾಯೆಯಿಂದ ಕೂಡಿಕೊಂಡಿರುವವನು ಮಾತ್ರ ನಮಸ್ಕರಿಸಲಿಲ್ಲ ಎಂದು ಹೇಳಿದ್ದಾನೆ. ಆತನನ್ನು ಇಬ್ಲೀಸು ಎನ್ನುತ್ತೇವೆ ಎಂದು ಹೇಳಿದ್ದಾನೆ. ಇಲ್ಲಿ ವಾಸ್ತವ ವಿಷಯವನ್ನು ನೋಡಿದರೇ ವಾಕ್ಯದಲ್ಲಿ ಹೇಳಿರುವಹಾಗೆಯೇ ಹೊರಗೆ ಕಾಣಿಸುತ್ತಿದೆ. ದೇವರೇ ಭೂಮಿಮೇಲಕ್ಕೆ ಮನುಷ್ಯರ ಮಧ್ಯದೊಳಗೆ ಬಂದು ಜ್ಞಾನವನ್ನು ಹೇಳಿ ಧರ್ಮಗಳನ್ನು ತಿಳಿಸುವಾಗ ಕೂಡಾ ಆತನು ದೇವರ ಪ್ರತಿನಿಧಿಯೆಂದು ತಿಳಿದರೂ, ಆತನಿಗೆ ದೇವದೂತರೆಲ್ಲರೂ ನಮಸ್ಕರಿಸಿದರೂ, ದೇವರೇ ಸ್ವತಃವಾಗಿ ನೀವು ಕೂಡಾ ನಮಸ್ಕರಿಸಿರೆಂದು ಹೇಳಿದರೂ ಈದಿನ ಕೆಲವರು ನಮಸ್ಕರಿಸುತ್ತಿಲ್ಲ. "ಯಾಕೆ ನಮಸ್ಕರಿಸುವುದಿಲ್ಲ?" ಎಂದು ಕೇಳಿದರೇ "ಇದು ನಮ್ಮ ಮತದಲ್ಲಿನ ಷರಿಯತ್ ಪ್ರಕಾರ ನಮಸ್ಕರಿಸುವುದಿಲ್ಲ" ಎಂದು ಹೇಳುತ್ತಿದ್ದಾರೆ. ಇದನ್ನು ಅನುಸರಿಸಿ ಇಬ್ಲೀಸರೊಂದಿಗೆ ಸಮಾನವಾಗಿ ಇವರು ಕೂಡಾ ಹೇಳುತ್ತಿದ್ದಾರೆ.

"ಅಂತಿಮ ದೈವಗ್ರಂಥ ಖುರಾನ್" ನಲ್ಲಿ ಈ ವಾಕ್ಯಕ್ಕೆ ಕೆಳಗೆ ಬರೆದಿರುವ ವಿವರದಲ್ಲಿ ಈ ವಿಧವಾಗಿದೆ ನೋಡಿ. **"ಇದು ಅಲ್ಲಾಹ್ ಆಜ್ಞೆ, ಅದನ್ನು ತಪ್ಪದೇ ಪಾಲಿಸಬೇಕು" ಎಂಬ ವಿಷಯದಲ್ಲಿ ಸಂದೇಹಕ್ಕೆ ಸ್ವಲ್ಪವೂ ಆಸ್ಕಾರವಿಲ್ಲ. ಆದರೇ "ಅಂತಿಮ ದೈವಪ್ರವಕ್ತ ಮುಹಮ್ಮದ್ (ಸ) ಷರಿಯತ್ ಪ್ರಕಾರ ಗೌರವಾರ್ಥವು ಕೂಡಾ ಈ ವಿಧವಾದ ಸಾಷ್ಟಾಂಗ ಪ್ರಣಾಮ ಮಾಡುವುದು ಸಮ್ಮತವಲ್ಲ"** ಈ

ವಿಧವಾಗಿ ಹೇಳಿರುವುದರಿಂದ ದೇವರ ಆಜ್ಞೆ ಕೂಡಾ ಮತ ಕಾನೂನಿನ ಕೆಳಗೆ ಲೆಕ್ಕಿಸಲ್ಪಡಲಿಲ್ಲವೆಂದು ಅರ್ಥವಾಗುತ್ತಿದೆ. ಕೊನೆಗೆ **"ಮತ"** ಎಂಬ ನಿಯಮವು ಮನುಷ್ಯನನ್ನು ಪಕ್ಕದಾರಿ ಹಿಡಿಸುತ್ತಿದೆ ಎಂದು ತಿಳಿಯುತ್ತಿದೆ. 'ಎಷ್ಟು ಸ್ವಾಮಿ ಪ್ರಸಾದವಾದರೂ ಇಷ್ಟು ಕಹಿನಾ ಎಂಬಂತೆ' ಯಾವ ಮತನಿಯಮವಾದರೂ ದೇವರ ಆಜ್ಞೆಗಳನ್ನು ಲೆಕ್ಕಮಾಡದೇ ಇವೆ. ಇದು ನಮ್ಮ ಮತ ನಿಯಮವೆಂದು ಹೇಳುವುದು ವಿಚಿತ್ರವಾಗಿದೆ. ಪರಲೋಕ ರಾಜ್ಯ ಬೇಕೆಂದರೇ, ನಾವು ನಿತ್ಯ ಅನುಭವಿಸುವ ಕರ್ಮಗಳಿಂದ ತಪ್ಪಿಸಿಕೊಳ್ಳಬೇಕೆಂದರೇ, ತಪ್ಪದೇ ದೇವರ ಜ್ಞಾನವನ್ನು ಪಾಟಿಸಬೇಕಾಗಿದೆ. ಆದರೇ ಮನುಷ್ಯ ದೇವರ ಆಜ್ಞೆಯನ್ನು ಗಾಳಿಗೆ ಬಿಟ್ಟು ನಮ್ಮ ಮತ, ನಮ್ಮ ಷರಿಯತ್ (ನಮ್ಮ ನಿಯಮಗಳು) ಎಂದು ಹೇಳುತ್ತಿದ್ದಾರೆ. ಯಾವುದೋ ಒಂದು ನೆಪ ಹೇಳಿ ಕೊನೆಗೆ ದೇವರ ಮಾತನ್ನು ಅತಿಕ್ರಮಿಸುವುದು ನಡೆಯುತ್ತಿದೆ. ದೇವರ ಆಜ್ಞೆಯನ್ನು ಮೀರಿ ಹೋಗುವುದು ತಪ್ಪು ಎಂದು ಅಂದುಕೊಳ್ಳುವುದು ಇಲ್ಲ ಆದರೆ, ಮತ ನಿಯಮಗಳನ್ನು ಬದಲಾಯಿಸಬೇಕೆಂದುಕೊಳ್ಳುವುದು ತಪ್ಪಾಗಿ ಕಾಣಿಸುತ್ತಿದೆ ಅಂದರೇ ಇವರ ಭಾವನೆಯಲ್ಲಿ ದೇವರು ಎಷ್ಟು ಗೌರವವಾಗಿ ಇದ್ದಾನೋ ತಿಳಿಯುತ್ತದೆ. ಮೇಲ್ನೋಟಕ್ಕೆ ನೋಡುವುದಕ್ಕೆ ಇಂಥವರು ನಿಜವಾದ ಅಲ್ಲಾಹ್ ಭಕ್ತರಾಗಿ ಕಾಣಿಸುತ್ತಿದ್ದರೂ ಇವರು ಅಲ್ಲಾಹ್ ಭಕ್ತರಲ್ಲ, ಮತವೊಂದರ ಭಕ್ತರೇ ಎಂದು ತಿಳಿಯುತ್ತಿದೆ.

**27) ಪ್ರಶ್ನೆ :– ದೇವರ ಇಷ್ಟಪ್ರಕಾರವಾಗಿ ಜೀವಿಸಬೇಕೆಂದುಕೊಂಡಿದ್ದೀರಾ? ಅಥವಾ ನಿಮ್ಮ ಇಷ್ಟದ ಪ್ರಕಾರ ಜೀವಿಸಬೇಕೆಂದುಕೊಂಡಿದ್ದೀರಾ?**

**ಉತ್ತರ :–** ಮನುಷ್ಯ ಇಷ್ಟಾಯಿಷ್ಟಗಳು ಪ್ರಪಂಚ ವಿಷಯದಲ್ಲಿ ಕರ್ಮವನ್ನು ಅನುಸರಿಸಿ ನೆರವೇರುವುದು, ನೆರವೇರದೇ ಹೋಗುವುದು ನಡೆಯುತ್ತದೆ. ಆದ್ದರಿಂದ ಮನುಷ್ಯನ ಇಷ್ಟಪ್ರಕಾರ ಜೀವಿಸಬೇಕೆಂದುಕೊಂಡರೂ, ಅದು ನಡೆಯುವುದೆಂಬ ನಂಬಿಕೆಯಿಲ್ಲ. ಆದ್ದರಿಂದ ಮನುಷ್ಯ ಇಷ್ಟಾಯಿಷ್ಟಗಳನ್ನು ನೋಡಬೇಕಾದ ಕೆಲಸವಿಲ್ಲ. ಇನ್ನು ದೇವರ ಇಷ್ಟದ ಪ್ರಕಾರ ಜೀವಿಸಬೇ

ಕೆಂದುಕೊಂಡಿದ್ದೀರಾ? ಎಂದು ಕೇಳಿರುವ ಪ್ರಶ್ನೆಗೆ ಉತ್ತರ ನೋಡಿದರೇ ಈ ವಿಧವಾಗಿದೆ. ದೇವರಿಗೆ ಒಂದು ಜ್ಞಾನ ಹೊರತು ಯಾವುದೂ ಇಷ್ಟವಿರುವುದಿಲ್ಲ. ಅಂದರೇ ಉಳಿದ ಎಲ್ಲವನ್ನೂ ಪ್ರಪಂಚ ಇಷ್ಟಕ್ಕೆ ಬಿಟ್ಟುಹಾಕಿ, ತಾನು ಮಾತ್ರ ಮನುಷ್ಯನಿಂದ ಏನೂ ಕೋರುತ್ತಿಲ್ಲ. ದೇವರು ಎಲ್ಲೋ ಮೇಲೆ ಇದ್ದಾನೆಂದು ಕೆಲವರು ಹೇಳುತ್ತಿರುತ್ತಾರೆ. ಆದರೇ ದೇವರು ಪ್ರತಿ ಮನುಷ್ಯನ ಶರೀರದಲ್ಲಿ ಇದ್ದಾನೆ. ದೇವರು ಶರೀರದಲ್ಲಿ ನಡೆಯುತ್ತಿರುವವುಗಳನ್ನೆಲ್ಲ ನೋಡುತ್ತಾ ಸುಮ್ಮನಿದ್ದಾನೆ. ಈ ವಿಷಯವನ್ನೇ ಖುರಾನ್ ಗ್ರಂಥದಲ್ಲಿ ಸೂರಾ 50, ಆಯತ್ 21ರಲ್ಲಿ ಹೀಗೆ ಹೇಳಿದ್ದಾರೆ.

**(50-21) "ಪ್ರತಿ ಮನುಷ್ಯ ಒಬ್ಬ ನಡೆಸುವವನು, ಒಬ್ಬ ಸಾಕ್ಷಿಯಾಗಿರುವ ಅವರೊಂದಿಗೆ ಸಹ ಬರುತ್ತಿದ್ದಾನೆ"**

ಎಂದು ಇದೆ. ಪ್ರತಿ ಜೀವಿಯು ತನ್ನ ಹಿಂದೆ ಕೆಲಸಮಾಡುವ ಆತ್ಮ ಮತ್ತು ಕೆಲಸಮಾಡದೆ ಕೇವಲ ನೋಡುತ್ತಿರುವ ಪರಮಾತ್ಮದೊಂದಿಗೆ ಸಹ ಹುಟ್ಟುತ್ತಿದ್ದಾನೆ. ಶರೀರದಲ್ಲಿರುವ ದೇವರು ಸ್ಥಬ್ದತೆಯಾಗಿ ಇದ್ದು ಹೋಗಿದ್ದಾನೆ ಹೊರತು ತನ್ನ ಇಷ್ಟವನ್ನು, ಸೃಷ್ಠಿ ಆದಿಯಲ್ಲಿ ಪ್ರಕಟಿಸುವುದು ಹೊರತು ಈಗ ಮಾತ್ರ ಯಾವ ಇಷ್ಟವಿಲ್ಲದವನಾಗಿ ಇದ್ದಾನೆ. ಮನುಷ್ಯನಿಗೆ ಗುಣಗಳನ್ನು ಅನುಸರಿಸಿ ಇಷ್ಟಾಯಿಷ್ಟಗಳಿರಬಹುದು ಆದರೇ, ಆತ್ಮ ಅವನ ಕರ್ಮ ಇದ್ದರೇ ನೆರವೇರಿಸಬಲ್ಲದು, ಕರ್ಮ ಇಲ್ಲದೇ ಹೋದರೇ ನೆರವೇರಿಸುವುದಿಲ್ಲ. ದೇವರು ಪ್ರತಿಯೊಂದನ್ನು ಆತ್ಮಕ್ಕೆ ಒಪ್ಪಿಸಿ ಸುಮ್ಮನಿದ್ದುಹೋಗಿದ್ದಾನೆ. ಆದ್ದರಿಂದ ಆತನಿಗೆ ಇಷ್ಟಾಯಿಷ್ಟಗಳಿರುವುದಿಲ್ಲ.

**28) ಪ್ರಶ್ನೆ :– "ಯೂನಿಟೀ ಸಲುವಾಗಿ ಕನಿಷ್ಟ ಏಳು ವಾಕ್ಯಗಳು ಅರಬ್ಬೀಯಲ್ಲಿ ಬಂದರೂ ಸರಿಹೋಗುತ್ತದೆ." ಎಂದಿದ್ದಾರೆ. ಇದಕ್ಕೆ ನಿವೇನು ಹೇಳುತ್ತೀರಿ?**

**ಉತ್ತರ :–** ಯೂನಿಟೀಗಾಗಿ ಎಂದರೇ ಸರಿಯೆಂದು ಹೇಳಬಹುದು ಆದರೇ, ಏಳು ವಾಕ್ಯಗಳ ಪ್ರಾರ್ಥನೆ ಯೂನಿಟೀಗಾಗಿನಾ? ಅಥವಾ ದೇವರಿಗಾಗಿನಾ?

ಎಂಬ ಪ್ರಶ್ನೆ ಬರಬಹುದು. ಇಲ್ಲಿ ಸ್ವಚ್ಛವಾಗಿ ಯೂನಿಟೀಗಾಗಿ ಎಂದು ಇರುವುದರಿಂದ ಅದು ಪ್ರಪಂಚ ವಿಷಯವೆಂದು ತಿಳಿಯುತ್ತಿದೆ. ದೇವರ ಹತ್ತಿರಕ್ಕೆ ಹೋಗುವ ಸಲುವಾಗಿ ಮಾಡುವುದಲ್ಲವೆಂದು ತಿಳಿದಾಗ, ಅವರೇ ಅವರ ಬಾಯಿಯಮೂಲಕ ಕೇವಲ ಯೂನಿಟೀ ಸಲುವಾಗಿ ಎಂದು ಹೇಳುವುದರಿಂದ ಅವರು ಮಾಡುವ ಪ್ರಾರ್ಥನೆ ಪ್ರಪಂಚ ಸಂಬಂಧವಾದುದೇ ಆದರೇ ದೈವಿಕ ವಾದುದಲ್ಲವೆಂದು ಅರ್ಥವಾಗುತ್ತಿದೆ. ಕಾಣಿಸುತ್ತಿದ್ದರೇ ಇಣಿಕಿ ನೋಡಬೇಕಾದ ಅವಶ್ಯವಿಲ್ಲದಂತೆ ದೇವರ ವಿಷಯವಾದರೇ ಮಾತನಾಡಬಲ್ಲೆವು ಆದರೇ, ಪ್ರಪಂಚ ವಿಷಯವನ್ನು ಕುರಿತು ಮಾತನಾಡುವುದಿಲ್ಲ.

ಯೂನಿಟೀಗಾಗಿ ಏಳು ವಾಕ್ಯಗಳನ್ನು ಸುಲಭವಾಗಿ ಕಲಿಯಬಹುದು. ಆದರೇ ಆ ಕಲಿಯುವುದು ಯಾವುದೋ ಅರಬ್ಬೀ ಭಾಷೆಯಲ್ಲಿಯೇ ಕಲಿಯಬೇಕೆನ್ನುವುದೇ ಸಮಸ್ಯೆ. ಅರಬ್ಬೀ ಭಾಷೆಬರದವರೆಲ್ಲರೂ ನಮ್ಮ ಗತಿ ಏನು? ಎಂದು ಸಂದಿಗ್ಧದಲ್ಲಿ ಬಿದ್ದುಹೋಗಿದ್ದಾರೆ. ಸ್ವಲ್ಪ ವಯಸ್ಸು ಕಳೆದವರು ಈಗ ಭಾಷೆ ಕಲಿಯುವುದಕ್ಕೆ ಪ್ರಾರಂಭಿಸಿದರೇ ಅದು ಬರುವುದರೊಳಗೆ ನಾವು ಮರಣಿಸಿದರೂ ಏನೂ ಪ್ರಯೋಜನೆ ಇಲ್ಲ ಅಲ್ಲವೇ! ಎಂದು ದಿಗುಲುಗೊಂಡು, ಅವರಿಗೆ ಬಂದ ತೆಲುಗು ಭಾಷೆಯಲ್ಲಿಯೇ ಖುರಾನ್ ಗ್ರಂಥವನ್ನು ಓದಬೇಕೆಂದು ನಿರ್ಣಯಿಸಿಕೊಂಡು ಕೆಲವರು ಮುಸ್ಲಿಮ್‌ರು "ನಮಗೆ ತೆಲುಗು ಖುರಾನ್ ಕೊಡಿ, ಓದಿ ತಿಳಿದುಕೊಳ್ಳುತ್ತೇವೆ" ಎಂದು ಕೇಳಿದರೇ ಕೆಲವರು ಮುಸ್ಲಿಮ್‌ರು ಹಾಗೆ ನಮಗೆ ಬಂದ ಭಾಷೆಯಲ್ಲಿ ಓದಬಾರದೆಂದು ಅರಬ್ಬೀ ಭಾಷೆಯಲ್ಲಿಯೇ ಓದಬೇಕೆಂದು, ಇದು ಮುಸ್ಲಿಮ್‌ರ ಷರಿಯತ್ ಎಂದು ಹೇಳುವುದರಿಂದ ಕೆಲವರು ನಿರುತ್ಸಾಹಪಟ್ಟಿದ್ದಾರೆ. ನಲ್ಗೊಂಡಾ ಜಿಲ್ಲೆಯಲ್ಲಿ ದಾಮರಚರ್ಲ ಮಂಡಲದಲ್ಲಿ ಮುದಿಮಾನಿಕ್ಯ ಎಂಬ ಒಂದು ಗ್ರಾಮವಿದೆ. ಅಲ್ಲಿ ಕೆಲವು ಮುಸ್ಲಿಮ್ ಕುಟುಂಬಗಳಿವೆ. ಅವರಿಗೆ ತೆಲುಗು ಮಾತ್ರ ಬರುತ್ತದೆ. ಅರಬ್ಬೀ ಭಾಷೆ ಎಂದರೇ ಏನೋ ಕೂಡಾ ಅವರಿಗೆ ಗೊತ್ತಿಲ್ಲ. ಅಲ್ಲಿ ಸುಮಾರು ನಲವತ್ತು ಜನ ಮುಸ್ಲಿಮ್‌ರಿದ್ದಾರೆ. ಅವರು ತೆಲುಗಿನಲ್ಲಿ ಬರೆಯಲಾದ

ಖುರಾನ್‌ಗಾಗಿ ಬಹಳಜನರನ್ನು ಕೇಳಿದ್ದಾರೆ. ಆದರೇ ತೆಲುಗು ಖುರಾನ್‌ಗಳು ಇದ್ದರೂ ಅವರು ಮುಸ್ಲಿಮ್‌ರಾಗಿ ಇರುವುದರಿಂದ ಅವರಿಗೆ ತೆಲುಗು ಖುರಾನ್ ಗ್ರಂಥಗಳನ್ನು ಯಾರೂ ಅವರಿಗೆ ಕೊಡಲಿಲ್ಲ. ಅರಬ್ಬೀ ಭಾಷೆಯಲ್ಲಿರುವ ಖುರಾನ್‌ನನ್ನು ಕೊಡುತ್ತೇವೆ ಎಂದಿದ್ದಾರೆ. ಎರಡು ಮೂರು ಬಲವಂತವಾಗಿ ಕೊಟ್ಟಿದ್ದಾರೆ. ಅದರಿಂದ ಯಾವ ಪ್ರಯೋಜನೆ ಇಲ್ಲ. ಅರಬ್ಬೀ ಭಾಷೆ ಬರದಿರುವುದರಿಂದ ಅವರು ಅವುಗಳನ್ನು ಓದಲಿಲ್ಲ. ಕೊನೆಗೆ ನಮ್ಮನ್ನು ತೆಲುಗು ಖುರಾನ್ ಗ್ರಂಥಗಳು ಬೇಕೆಂದು ಕೇಳಿದ್ದಾರೆ. ಖುರಾನ್ ಓದಬೇಕೆನ್ನುವ ಅವರ ಶ್ರದ್ಧೆಗೆ ನಮಗೆ ಸಂತೋಷ ಉಂಟಾಗಿ ನಮ್ಮ ಬಳಿ ಕೆಲವು ಆಯತ್‌ಗಳಿಗೆ ಮಾತ್ರವೇ ವಿವರವಿರುವ **"ಅಂತಿಮ ದೈವಗ್ರಂಥದಲ್ಲಿ ಜ್ಞಾನ ವಾಕ್ಯಗಳು"** ಎಂಬ 700 ಪುಟಗಳ ಗ್ರಂಥವನ್ನು ಉಚಿತವಾಗಿ ಕೊಡಲು ಬಯಸಿ ನಲವತ್ತು ಗ್ರಂಥಗಳನ್ನು ಆ ಊರಿಗೆ ಕಳುಹಿಸಲಾಗಿದೆ. ಅಲ್ಲಿಗೆ ಹೋದ ನಂತರ ಒಬ್ಬ ಮುಸ್ಲಿವ್ ನಾಯಕನು ಬಂದು ಮುಸ್ಲಿವ್‌ರು ತೆಲುಗು ಖುರಾನ್ ಓದಬಾರದೆಂದು ಅವರಿಗೆ ಗ್ರಂಥಗಳನ್ನು ಕೊಡದೇ ಆತಂಕಪಡಿಸಿದನು. "ನಾವು ಉಚಿತವಾಗಿ ಕೊಡುವುದಕ್ಕೆ ಬಂದಿದ್ದೇವೆ. ನಿಮಗೆ ಇಷ್ಟವಿದ್ದರೇ ತೆಗೆದುಕೊಳ್ಳಿ ಇಲ್ಲದೇ ಹೋದರೇ ಇಲ್ಲ" ಎಂದು ಹೇಳಿದ್ದೇವೆ. ಆಗ ಕೆಲವರು ಮರೆಯಲ್ಲಿ ಆರು ಗ್ರಂಥಗಳು ತೆಗೆದುಕೊಂಡಿದ್ದಾರೆ. 'ಖುದಾ ಇಸ್ಲಾಮಿಕ್ ಸ್ಪಿರುಚ್ಯುವಲ್ ಸೊಸೈಟಿ' ಅಧ್ಯಕ್ಷನು ಅಮೀರ್ ಅಲೀ, ಆತನಿಗೆ ಜೊತೆಯಾಗಿ ಮತ್ತೊಬ್ಬ ವ್ಯಕ್ತಿ ಹೈದರಾಬಾದ್‌ನಿಂದ ಅಲ್ಲಿಗೆ ಹೋಗಿ ಆರು ಗ್ರಂಥಗಳು ಮಾತ್ರ ಕೊಟ್ಟು ತಿರುಗಿ ಬಂದರು.

ಯೂನಿಟೀಗಾಗಿ ಅರಬ್ಬೀ ಭಾಷೆ ಎನ್ನುವ ನಿನಾದದಿಂದ, ಖುರಾನ್ ನನ್ನು ಅರಬ್ಬೀಯಲ್ಲಿ ಓದಬೇಕೆಂದು ಹೇಳುವುದರಿಂದ, ಭಾಷೆಬರದವರಿಗೆ ಖುರಾನ್ ಜ್ಞಾನವೇ ತಿಳಿಯದೇ ಹೋಗುತ್ತಿದೆ ಅಲ್ಲವೇ! ನಲ್ಗೊಂಡಾ ಜಿಲ್ಲೆಯಲ್ಲಿ ಒಂದು ಗ್ರಾಮದ ಪರಿಸ್ಥಿತಿ ಹಾಗೆಯೇ ಆಗಿದೆ ಆಲ್ಲವೇ! ಅವರಿಗೆ ಭಾಷೆ ಬರುವುದಿಲ್ಲ. ಭಾಷೆಯನ್ನು ಕಲಿಸುವವರು ಅಲ್ಲಿಲ್ಲ. ಒಂದುವೇಳೆ ಅಲ್ಲಿ ಅರಬ್ಬೀ

ಭಾಷೆಯನ್ನು ಕಲಿಸುವವರಿದ್ದರೂ ಅವರು ನಿತ್ಯವು ಕೂಲಿ ಕೆಲಸಕ್ಕೆ ಹೋಗುವವರು, ಕಲಿಯುವುದಕ್ಕೆ ಸಮಯವಿಲ್ಲ. ಕೊನೆಗೆ ಭಾಷೆ ಆತಂಕವನ್ನು ಅತಿಕ್ರಮಿಸಿ ತೆಲುಗಿನಲ್ಲಿ ಓದುವುದಕ್ಕೆ ಮತ ನಿಯಮಗಳು ಅಡ್ಡ ಬರುವುದರಿಂದ ಒಂದು ಗ್ರಾಮದಲ್ಲಿ ಖುರಾನ್ ಜ್ಞಾನವೇ ತಿಳಿಯದೇ ಹೋಗಿದೆ. ಆಹಾರ ನಿಯಮಗಳನ್ನು ಕುರಿತು ಸೂರಾ 5, ಆಯತ್ 3ರಲ್ಲಿ ಇಂತಹ ಆಹಾರವನ್ನು ತಿನ್ನಬಾರದೆಂದು ಹೇಳುವುದು ನಡೆದಿದೆ. ಆಹಾರವನ್ನು ಕುರಿತಾದ ಸಂಪೂರ್ಣವಾದ ಧರ್ಮವನ್ನು ಬೋಧಿಸಿದ್ದೇನೆಂದು ಅಲ್ಲಿ ವಾಕ್ಯದಲ್ಲಿ ದೇವರು ಹೇಳಿದ್ದಾನೆ. ಆದರೇ ಕೊನೆಯಲ್ಲಿ ಯಾವ ಆಹಾರ ದೊರೆಯದಿದ್ದಾಗ, ಯಾವ ಗತ್ಯಂತರವಿಲ್ಲದಿರುವಾಗ ಹಸಿವಿನಿಂದ ಬಾಧೆ ಪಡುವುದಕ್ಕಿಂತಲೂ ನಿಷೇಧಿತ ಆಹಾರವನ್ನು ತಿಂದರೂ ಪರವಾಗಿಲ್ಲ, ನಾನು ಕ್ಷಮಿಸುತ್ತೇನೆ ಎಂದು ದೇವರೇ ಸ್ವಲ್ಪ ಅವಕಾಶ ಕೊಟ್ಟಾಗ, ಒಂದು ತೆಲುಗು ಭಾಷೆ ಹೊರತುಪಡಿಸಿ ಇತರ ಯಾವ ಭಾಷೆ ತಿಳಿಯದಿದ್ದಾಗ, ಜ್ಞಾನವನ್ನು ತಿಳಿಯುವುದಕ್ಕೆ ಅರಬ್ಬೀ ಭಾಷೆಯನ್ನು ಕಲಿಯುವುದಕ್ಕೆ ಅವಕಾಶವಿಲ್ಲದಿರುವಾಗ, ಜ್ಞಾನವು ಬೇರೆ ವಿಧವಾಗಿ ತಿಳಿಯುವ ಗತ್ಯಂತರ ಇಲ್ಲದಿರುವಾಗ, ಖುರಾನ್‌ನನ್ನು ಇತರ ಭಾಷೆಯಲ್ಲಾದರೂ ತಿಳಿಯಬಹುದೆಂದು ದೇವರು ಹೇಳಿರುವುದಿಲ್ಲವೇ? ಎಂದು ಅನುಮಾನ ಬಾರದೇ ಇರುವುದಿಲ್ಲ. ಹಸಿವಿನಿಂದ ಬಳಲುವಾಗ, ಬೇರೇ ಆಹಾರ ದೊರೆಯದೇ ಇದ್ದಾಗ ಹಸಿವಿನಿಂದ ಸಾಯುವುದಕ್ಕಿಂತಲೂ ಹಂದಿಮಾಂಸವನ್ನು ತಿಂದಾದರೂ ಹಸಿವು ತೀರಿಸಿಕೊಳ್ಳ ಬಹುದೆಂದು, ಹಾಗೆ ಗತ್ಯಂತರವಿಲ್ಲದೇ ಮಾಡಿರುವ ಪಾಪವನ್ನು ಅಲ್ಲಾಹ್ ಕ್ಷಮಿಸುತ್ತಾನೆಂದು (5–3) ರಲ್ಲಿ ಇರುವಾಗ ಯಾವ ಅವಕಾಶ ಇಲ್ಲದಿರುವಾಗ ತೆಲುಗಿನಲ್ಲಾದರೂ ಓದಬಹುದೆಂದು ಯಾಕೆ ಹೇಳಿರಬಾರದು? ಎಂದು ನೋಡಿದರೇ, ಅಂತಿಮ ದೈವಗ್ರಂಥವಾದ ಖುರಾನ್ ಗ್ರಂಥದಲ್ಲಿ ಎಲ್ಲಿಯೂ ಸಹ ಅರಬ್ಬೀ ಭಾಷೆಯಲ್ಲಿಯೇ ಗ್ರಂಥವನ್ನು ಓದಬೇಕೆಂದಾಗಲೀ, ಪ್ರಾರ್ಥನೆ ಅರಬ್ಬೀ ಭಾಷೆಯಲ್ಲಿಯೇ ಮಾಡಬೇಕೆಂದಾಗಲೀ ಇಲ್ಲ. ಆಹಾರ ವಿಷಯದಲ್ಲಿ (5–3) ರಲ್ಲಿ ನಿಷೇಧಿತ ಆಹಾರವನ್ನು ಹೇಳಿರುವ ದೇವರೇ ಅವಕಾಶ ವಿಲ್ಲದಿರುವಾಗ ತಿಂದರೂ ಕ್ಷಮಿಸುತ್ತೇನೆಂದು ಹೇಳಿದ್ದರೇ, ಎಲ್ಲೂ ಸಹ ಇತರ

ಭಾಷೆಯಲ್ಲಿ ಓದುವುದು ನಿಷೇಧಿತವೆಂದು ಹೇಳದಿರುವಾಗ ಇತರ ಭಾಷೆಯಲ್ಲಿ ಓದಿದರೂ ಅದು ತಪ್ಪಲ್ಲ, ಅದು ಕ್ಷಮಿಸುವುದೇ ಅಲ್ಲವೇ!

ಕೆಲವರು ನಾವು ಮತ ಹಿರಿಯರೆಂದೋ, ಮತದಲ್ಲಿ ಜ್ಞಾನಿಗಳೆಂದೋ, ಗುರುಗಳೆಂದೋ ಯಾವುದೋ ಒಂದು ಹಿರೆತನವನ್ನು ಪ್ರದರ್ಶಿಸುತ್ತಾ ಅಮಾಯಕ ಮುಸ್ಲಿಮ್‌ರನ್ನು ತಮಗೆ ಇಷ್ಟವಾದಹಾಗೆ ಆಡಿಸುತ್ತಿದ್ದಾರೆ. ತಮ್ಮ ಕೈಕೆಳಗೆ ಇಟ್ಟುಕೊಳ್ಳುತ್ತಿದ್ದಾರೆ. ಬಹಳಜನ ಅವರ ಮಾತುಗಳನ್ನು ಕೇಳುತ್ತಿದ್ದಾರೆ. ಅದರಿಂದ ದೇವರ ಜ್ಞಾನಕ್ಕೆ ಹತ್ತಿರವಾಗುವುದು ಹೋಗಿ ದೂರವಾಗುವುದಕ್ಕೆ ಅವಕಾಶವಿದೆ. ಆದ್ದರಿಂದ ಅಂಥವರ ಮಾತುಗಳನ್ನು ನಂಬಬಾರದೆಂದು, ಖುರಾನ್‌ನಲ್ಲಿನ ಜ್ಞಾನವನ್ನು ಮಾತ್ರ ತಿಳಿಯಬೇಕೆಂದು ದೇವರು ಮನುಷ್ಯರಿಗೆ ಹೇಳುತ್ತಾ ಸೂರಾ 5, ಆಯತ್ 48ರಲ್ಲಿ ಹೇಳಿದ್ದಾನೆ ನೋಡಿರಿ.

(5-48) **"ನಾವು ನಿನ್ನ ಸಲುವಾಗಿ ಈ ಖುರಾನ್ ಗ್ರಂಥವನ್ನು ಸತ್ಯಸಮೇತವಾಗಿ ಅವತರಿಸುವಂತೆ ಮಾಡಿದ್ದೇವೆ. ಇದು ತಮಗಿಂತಲೂ ಮೊದಲು ಬಂದಿರುವ ಗ್ರಂಥಗಳನ್ನು ಸತ್ಯವೆಂದು ದೃಢಪಡಿಸುತ್ತಿದೆ. ನಿನ್ನ ಬಳಿಗೆ ಬಂದಿರುವ ಸತ್ಯವನ್ನು ಬಿಟ್ಟು ಅವರ ಮನೋ ಇಚ್ಛೆಯನ್ನು ಅನುಸರಿಸಬೇಡ"**.

ಈ ವಾಕ್ಯದಲ್ಲಿ ಕೊನೆಯದಾಗಿ "ನಿನ್ನ ಬಳಿಗೆ ಬಂದಿರುವ ಸತ್ಯವನ್ನು ಬಿಟ್ಟು ಅವರ ಮನೋಇಚ್ಛೆಗಳನ್ನು ಅನುಸರಿಸಬೇಡ" ಎಂದು ಇದೆ. ಇಲ್ಲಿ ಚೆನ್ನಾಗಿ ವಿವರವಾಗಿ ನೋಡಿಕೊಂಡರೇ ನಿನಗೆ ಸತ್ಯದಿಂದ ಕೂಡಿಕೊಂಡಿರುವ ಜ್ಞಾನವನ್ನು ಕೊಟ್ಟಿದ್ದೇನೆ. ನೀವು ಇತರರ ಮಾತುಗಳನ್ನು ಕೇಳಿ ಅವರ ಮನೋಭಾವನೆಗಳ ಪ್ರಕಾರ ನಡೆದುಕೊಳ್ಳಬೇಡ. ನನ್ನ ಭಾವನೆಯನ್ನು ಅನುಸರಿಸಿ ಖುರಾನ್ ಜ್ಞಾನವನ್ನು ನೀನು ಯಾವ ಭಾಷೆಯಲ್ಲಾದರೂ ತಿಳಿದುಕೋ, ಆದರೇ ನಾನು ಹೇಳದ ವಿಷಯವನ್ನು ಉತ್ತೇಜಿಸಿ ಗ್ರಂಥವನ್ನು ಅರಬ್ಬೀಯಲ್ಲಿಯೇ ಓದಬೇಕೆಂದು ಹೇಳುವವರ ಮಾತುಗಳನ್ನು ಕೇಳಬೇಡ. ಅವರ ಮನೋ ಇಚ್ಛೆಗಳಿಗೆ ಜ್ಞಾನಕ್ಕೆ ಸಂಬಂಧವಿಲ್ಲ. ನಾನು ಭಾಷೆಯನ್ನು ಕುರಿತು ಎಲ್ಲೂ ಹೇಳದಿದ್ದರೂ, ಅವರ ಸ್ವಂತ ಬುದ್ಧಿಯನ್ನು ಉಪಯೋಗಿಸಿ ಹೇಳುವ

ಮಾತುಗಳನ್ನು ಕೇಳಬೇಡಿ. ಎಂದು ಹೇಳುತ್ತಾ "ಅವರ ಮನೋಇಚ್ಛೆಗಳನ್ನು ಅನುಸರಿಸಬೇಡ" ಎಂದು ಹೇಳಿದ್ದಾನೆ. ಅಲ್ಲಾಹ್ ತನ್ನ ಗ್ರಂಥದಲ್ಲಿ ಎಲ್ಲೂ ಭಾಷೆಯನ್ನು ಕುರಿತಾದ ಪ್ರಸ್ತಾವನೆಯೇ ತರಲಿಲ್ಲ. ದೇವರಿಗೆ ಭಾಷೆಗಳೊಂದಿಗೆ ಸಂಬಂಧವಿಲ್ಲ, ಭಾವನೆಯೊಂದಿಗೆಯೇ ಸಂಬಂಧವೆಂದು ಮೊದಲೇ ಹೇಳಿದ್ದೇವೆ. ಭೂಮಿಮೇಲೆ ಹುಟ್ಟಿರುವ ಅಂಡಜ, ಪಿಂಡಜ, ಉದ್ಭಿಜಗಳಿಗೇ ಭಾಷೆಯ ಅಗತ್ಯ. ಪಾಲಿಸಲ್ಪಡುವ ಜೀವರಾಶಿಗಳಲ್ಲಿರುವ ಮನುಷ್ಯರಿಗೆ ಕೂಡಾ ಭಾಷೆ ಅಗತ್ಯವೇ. ಆದ್ದರಿಂದ ಮನುಷ್ಯನಿಗೆ ಜನ್ಮದಿಂದ ಒಂದು ಭಾಷೆ ಬಂದರೇ, ಸಹನೆ ಇದ್ದರೇ ಮತ್ತೊಂದು ಅಥವಾ ಎರಡು, ಮೂರು ಕಲಿಯುತ್ತಿದ್ದಾನೆ. ಬಹಳಜನ ಒಂದು ಭಾಷೆಯಿಂದಲೇ ಬದುಕುತ್ತಿದ್ದಾರೆ. ಅಂತಹವರಿಗೆಲ್ಲರಿಗೂ ದೇವರು ಅವರಿಗೆ ತಿಳಿದ ಭಾಷೆಯಲ್ಲಿಯೇ ಜ್ಞಾನವನ್ನು ತಿಳಿಯುವುದಕ್ಕೆ ತಾನು ಬೋಧಕರನ್ನು, ಪ್ರವಕ್ತರನ್ನು ಆ ಪ್ರಾಂತೀಯ ಭಾಷೆಯಲ್ಲಿ ಮಾತನಾಡುವವರನ್ನೇ ಕಳಿಹಿಸಿದ್ದೇವೆ ಎಂದಿದ್ದಾನೆ. ಹಾಗಿರುವಾಗ ಅರಬ್ಬೀ ಭಾಷೆಯೆಂದು ಕೆಲವರು ಹೇಳುತ್ತಿದ್ದಾರೆಂದರೇ ಅದು ಅವರ ಆಧಿಪತ್ಯವನ್ನು ಪ್ರದರ್ಶಿಸಿಕೊಳ್ಳುವುದಕ್ಕೆಂದು ಹೇಳಬಹುದು. ಅಂಥವರ ಮಾತುಗಳನ್ನು ಅನುಸರಿಸಬೇಡವೆಂದು (5–48) ರಲ್ಲಿ ದೇವರು ಹೇಳಿದ್ದಾನೆ ಅಲ್ಲವೇ!

**29) ಪ್ರಶ್ನೆ :– ಯಾರಾದರೂ, ಅವರ ಮಾತನ್ನು ಅಲ್ಲಗಳೆದರೇ ಅವರನ್ನು ನಾಸ್ತಿಕರು ಎಂದು, ಹೇತುವಾದಿಗಳೆಂದು, ಅಜ್ಞಾನ ಗುಂಪಿಗೆ ಸೇರಿದವರೆಂದು ಹೇಳುತ್ತಾರೆ. ನಾಳೆ ನಿಮ್ಮ ಉತ್ತರವನ್ನು ನೋಡಿದ ನಂತರ ನಿಮ್ಮನ್ನು ನಾಸ್ತಿಕರೆಂದು ಕರೆದರೂ ಆಶ್ಚರ್ಯವಿಲ್ಲ. ಆತನು ನಾಸ್ತಿಕರೆಂದರೂ, ಹೇತುವಾದಿಗಳೆಂದರೂ ನೀವು ಅದಕ್ಕೆ ಉತ್ತರ ಏನೆಂದು ಹೇಳಬಲ್ಲಿರ?**

**ಉತ್ತರ :–** "ಹೊಡೆಯುವುದಕ್ಕೆ ಬಾರದಿದ್ದಾಗ ಕಚ್ಚುವುದಕ್ಕೆ ಶುರು ಮಾಡಿದನಂತೆ" ಎನ್ನುವ ಗಾದೆಯ ಪ್ರಕಾರ ಕೆಲವರು ಸರಿಯಾದ ಉತ್ತರ ಹೇಳದಿರುವಾಗ ಎದುರಿಗಿರುವವರನ್ನು ಯಾವುದೋ ಒಂದು ಮಾತನಾಡಿ ತನ್ನನ್ನು ಗೆಲ್ಲಿಸಿಕೊಳ್ಳುವುದಕ್ಕೆ ಇತರರನ್ನು ನಾಸ್ತಿಕರೆಂದೋ, ಹೇತುವಾದಿಗಳೆಂದೋ ಹೇಳುತ್ತಿರುತ್ತಾರೆ.

ಇನ್ನೂ ಕೆಲವರು ನಾನು ಸಾತಾನ್ ಪಾರ್ಟಿಯಲ್ಲಿ ಇದ್ದೇನೆಂದು, ದೇವರಿಗೆ ವಿರುದ್ಧವಾಗಿ ಮಾತನಾಡುತ್ತಿದ್ದೇನೆಂದು ಕೂಡಾ ಹೇಳುತ್ತಿರುತ್ತಾರೆ. ಯಾರು ಏನು ಹೇಳಿದರೂ ನಾನು ಹೇಳುವುದೇನೋ ಪ್ರಜೆಗಳು ಗಮನಿಸುತ್ತಿರುವುದರಿಂದ ಇಬ್ಬರಿಗೂ ನನ್ನನ್ನು ಕುರಿತು ತಿಳಿಯುತ್ತಿದೆ. ಹಾಗಿರುವಾಗ ಯಾರೋ ನನ್ನನ್ನು ನಾಸ್ತಿಕನು, ಹೇತುವಾದಿ ಎನ್ನುವುದರಲ್ಲಿ ನನಗೆ ಏನು ನಷ್ಟವಿಲ್ಲ. ನಾನು ನಾಸ್ತಿಕನಲ್ಲವೆಂದು ನನ್ನ ರಚನೆಗಳು ಓದಿದವರಿಗೆ ತಿಳಿಯುತ್ತದೆ.

ನನ್ನನ್ನು ಕುರಿತು ನಾನು ಹೇಳಬೇಕೆಂದರೇ, ದೇವರ ಜ್ಞಾನ ವಿಷಯಗಳಲ್ಲಿ ಅದು ಯಾವ ಮತದಲ್ಲಿ ಇರುವುದಾದರೂ, ತಪ್ಪು ಭಾವನೆ ಹೇಳುವಾಗ, ಅದು ಸರಿಯಾದ ಪದ್ಧತಿ ಅಲ್ಲವೆಂದು, ದೇವರ ಜ್ಞಾನವನ್ನು ಸರಿಯಾದ ಭಾವನೆಯಿಂದ ತಿಳಿಯಬೇಕೆಂದು ವಾದಿಸುತ್ತಿರುತ್ತೇನೆ. ಆದ್ದರಿಂದ ಜ್ಞಾನದಲ್ಲಿ ಕಾರಣವಿಲ್ಲದೇ ಯಾವುದೂ ಇರುವುದಿಲ್ಲವೆಂದು, ಹೇತುವನ್ನು ಕುರಿತು ಪ್ರಶ್ನಿಸುತ್ತಿರುತ್ತೇನೆ. ಆದ್ದರಿಂದ ನನ್ನನ್ನು ಜ್ಞಾನ ಮಾರ್ಗದಲ್ಲಿ ಹೇತುವಾದನೆಂದು ಹೇಳುತ್ತಿರುತ್ತಾರೆ. ಯಾರು ಏನೆಂದರೂ ನಾನು ಅದರ ಬಗ್ಗೆ ತಲೆ ಕೆಡಿಸಿಕೊಳ್ಳುವುದಿಲ್ಲ. ನನ್ನ ಮುಂದೆಯೇ ದೇವರ ವಾಕ್ಯಗಳಿಗೆ ತಪ್ಪು ಅರ್ಥವನ್ನು ಹೇಳಿದರೇ ಅದನ್ನು ತಪ್ಪೆಂದು ಹೇಳದೇ ಇರಲಾರೆನು. ದೇವರ ಗ್ರಂಥಗಳಿಗೆ ದೇವರ ಜ್ಞಾನಕ್ಕೆ ಬೆಲೆ ಕೊಡುತ್ತೇನೆ ಆದರೇ ಮನುಷ್ಯರ ಜ್ಞಾನಕ್ಕೆ ಬೆಲೆಕೊಡುವುದಿಲ್ಲ. ಕೆಲವರು ತಾವು ದೇವರ ವಿಷಯದಲ್ಲಿ ತಪ್ಪು ಮಾಡುತ್ತಾ ಇತರರಲ್ಲಿ ತಪ್ಪುಗಳೆಣಿಸುತ್ತಿರುತ್ತಾರೆ. ಮನುಷ್ಯನಿಗೆ ಇಷ್ಟವಾದ ನಿರ್ಣಯಗಳು ದೈವ ಧರ್ಮಗಳೆಂದುಕೊಳ್ಳುವುದು ತಪ್ಪಲ್ಲವೇ! ಎಂದು ಇತರರ ತಪ್ಪುಗಳನ್ನು ತೋರಿಸುತ್ತಿರುವ ಕೆಲವರು ತಾವೇ ಗ್ರಂಥದಲ್ಲಿ ಬರೆಯದ, ದೇವರು ಹೇಳದಿರುವ ವಿಷಯಗಳನ್ನು ತಂದು ಧರ್ಮಗಳೆಂದು ಹೇಳುತ್ತಿದ್ದಾರೆ. ಭಾಷೆ ವಿಷಯದಲ್ಲಿ ದೇವರು ಹೇಳದ ನಿರ್ಣಯಗಳನ್ನು ತಂದು ಅವೇ ಮುಖ್ಯವಾದ ಧರ್ಮಗಳೆಂದು ಹೇಳುವ ತಮ್ಮ ಕೆಲಸ ತಪ್ಪಲ್ಲವೇ! ಎಂದು ಯೋಚಿಸುತ್ತಿಲ್ಲ. ತಾನು ಮಾಡುವ ಕೆಲಸವನ್ನೇ ಇತರರು ಮಾಡಿದರೇ ತಪ್ಪೆಂದು ಹೇಳುವವರನ್ನು

ಯಾರೂ ಪ್ರಶ್ನಿಸದಿದ್ದರೂ, ನಾವು ಪ್ರಶ್ನಿಸಿ ದೇವರ ಮಾರ್ಗವು ಎಲ್ಲರಿಗೂ ಸುಲಭವಾಗಿ ಇರುವಹಾಗೆ ಮಾಡಬೇಕೆನ್ನುವುದೇ ನಮ್ಮ ಉದ್ದೇಶ. ಈ ವಿಷಯದಲ್ಲಿ ನಮ್ಮನ್ನು ಕೆಲವರು ದೂಷಿಸಿದರೂ ಸಹಿಸಿಕೊಂಡು ಅವರಿಗೇ ಜ್ಞಾನವೊಂದರ ಬೆಲೆಯನ್ನು ತಿಳಿಸುತ್ತಿದ್ದೇವೆ.

**30) ಪ್ರಶ್ನೆ :– ತನ್ನ ಮನಸ್ಸನ್ನು ದೇವರಾಗಿ ಮಾಡಿಕೊಂಡವರು ದೇವರ ಪ್ರವಕ್ತರನ್ನು ಅನುಸರಿಸಲಿಲ್ಲ. ಮನಸ್ಸನ್ನು ಲಗಾಮಿಲ್ಲದ ಕುದುರೆಯಾಗಿ, ಚುಕ್ಕಾಣಿ ಇಲ್ಲದ ದೋಣಿಯಹಾಗೆ ಬಿಟ್ಟುಹಾಕಬಾರದು ಎಂದು ಹೇಳುತ್ತಿದ್ದಾರೆ. ಅದಕ್ಕೆ ನಿಮ್ಮ ಸಮಾಧಾನವೇನು?**

**ಉತ್ತರ :–** ಸರ್ವಸಾಧಾರಣವಾಗಿ ಎಲ್ಲರೂ ಹೇಳುವ ಮಾತುಗಳೇ ಇವು. ಮನಸ್ಸನ್ನು ಕುರಿತು ಆಳವಾಗಿ ತಿಳಿದುಕೊಂಡು ಮಾತನಾಡುತ್ತಿಲ್ಲ. ಮನಸ್ಸೆನ್ನುವ ಹೆಸರು ಕೇಳಿರುವವರೇ ಹೊರತು ಅದರ ಆಕಾರ ಹೇಗೆ ಇರುತ್ತದೋ, ಅದರ ಕೆಲಸವೇನೋ? ಅದರ ವಿಷಯ ಸಂಪೂರ್ಣವಾಗಿ ತಿಳಿದಿರುವವರು ಬಹುಶಃ ಯಾರೂ ಇರುವುದಿಲ್ಲ. ವಾಸ್ತವವಾಗಿ ಮನಸ್ಸನ್ನು ಕುರಿತು ತಿಳಿದುಕೊಂಡರೇ ಅದನ್ನು ಬಂಧಿಸಬೇಕೆಂದು ಯಾರೂ ಅಂದುಕೊಳ್ಳುವುದಿಲ್ಲ. ಅದನ್ನು (ಮನಸ್ಸನ್ನು) ಬಂಧಿಸಬೇಕು, ಇಷ್ಟಬಂದಹಾಗೆ ಬಿಡಬಾರದೆಂದರೇ, ಅನ್ನುವವರಿಗೆ ಮನಸ್ಸನ್ನು ಕುರಿತು ಪೂರ್ತಿ ತಿಳಿಯದೆಂದು ಅರ್ಥವಾಗುತ್ತಿದೆ. ಶರೀರದಲ್ಲಿನ ಮನಸ್ಸನ್ನು ತಿಳಿಯುವುದಕ್ಕೆ ಮೊದಲು ಬುದ್ಧಿಯನ್ನು ಕುರಿತು ತಿಳಿಯಬೇಕು. ಬುದ್ಧಿ ಮಾಡುತ್ತಿರುವ ಕೆಲಸವನ್ನು ಕುರಿತು, ಅದರ ಆಕಾರವನ್ನು ಕುರಿತು ತಿಳಿದಾಗ ಮನಸ್ಸನ್ನು ಕುರಿತು ತಿಳಿಯಲಾಗುವುದು. ಬುದ್ಧಿ ವಿಷಯ ತಿಳಿಯದೇನೆ ಮನಸ್ಸನ್ನು ಕುರಿತು ತಿಳಿಯಲಾರರು. ಬುದ್ಧಿ, ಮನಸ್ಸು ಒಂದಕ್ಕೊಂದು ಅವಿನಾಭಾವ ಸಂಬಂಧ ಹೊಂದಿವೆ. ಬುದ್ಧಿ ಕೆಲಸಮಾಡಿದರೇ ಮನಸ್ಸು ಕೆಲಸಮಾಡುವುದು. ಹಾಗೆಯೇ ಮನಸ್ಸು ಕೆಲಸ ಮಾಡಿದರೇ ಬುದ್ಧಿ ಕೆಲಸಮಾಡುತ್ತದೆ. ಬುದ್ಧಿ, ಮನಸ್ಸು ಶರೀರ ಅಂತರಂಗದಲ್ಲಿ ಮುಖ್ಯವಾದ ಎರಡು ಭಾಗಗಳು ಸೂಕ್ಷ್ಮವಾದವು, ಎರಡೂ ಕಣ್ಣಿಗೆ ಕಾಣಿಸುವವಲ್ಲ. ಬುದ್ಧಿ

ಮನಸ್ಸು ಎರಡು ಶರೀರದಲ್ಲಿರುವ ಜೀವಿಗೆ ಒಳಪಟ್ಟಿಲ್ಲ. ಜೀವಿಯ ಆಜ್ಞೆಯನ್ನು ಸ್ವಲ್ಪವಾದರೂ ಎರಡೂ ಲೆಕ್ಕಿಸುವುದಿಲ್ಲ. ಆದ್ದರಿಂದ ಅವುಗಳ ವಿಷಯ ತಿಳಿದ ಜ್ಞಾನಿ, ಅವುಗಳನ್ನು ಲಗಾಮು ಹಾಕಿರುವ ಕುದುರೆಯಹಾಗೆ ಅಧೀನದೊಳಗೆ ತಂದುಕೊಳ್ಳಲಾರನು. ಜ್ಞಾನಿ ಆದವನು ಅಂತಹ ಕೆಲಸವನ್ನು ಮಾಡುವುದಿಲ್ಲ. ಮನಸ್ಸು, ಬುದ್ಧಿ, ಚಿತ್ತ, ಅಹಂ ಎನ್ನುವವು ಇದ್ದರೂ, ಅವು ಜೀವಿಯ ಅಧೀನದಲ್ಲಿ ಇಲ್ಲ. ನಾಲ್ಕು ಅಂತಃಕರಣಗಳು ಶರೀರದಲ್ಲಿ ಜೀವಿಯ ನಂತರ ಮುಖ್ಯವಾದ ಭಾಗಗಳಾಗಿ ಇವೆ. ಈ ನಾಲ್ಕನ್ನು ಆತ್ಮ ತನ್ನ ಅಧೀನದಲ್ಲಿ ಇಟ್ಟುಕೊಂಡು ಶರೀರದಲ್ಲಿನ ಕರ್ಮವನ್ನು ಅನುಸರಿಸಿ ಅವುಗಳನ್ನು ಆಡಿಸುತ್ತಿರುತ್ತದೆ. ಇದರ ಪ್ರಕಾರ ಮನಸ್ಸು, ಬುದ್ಧಿ, ಚಿತ್ತ, ಅಹಂ ಎಂಬ ನಾಲ್ಕು ಕರ್ಮಾನುಸಾರ ಆತ್ಮದಿಂದ ನಡೆಸಲ್ಪಡುತ್ತಿವೆ ಎಂದು, ಜೀವಿಯ ಪ್ರಮೇಯವಿಲ್ಲದೇ ಇರುವ ಮನಸ್ಸನ್ನು ಜೀವಿಯು ಯಾವ ವಿಧವಾಗಿ ಕೂಡಾ ಶಾಶಿಸಿ ನಡೆಸಲಾರನೆಂದು, ತನ್ನ ಅಧೀನದಲ್ಲಿ ಇರಿಸಿಕೊಳ್ಳಲಾರನೆಂದು ತಿಳಿಯುತ್ತಿದೆ.

**31) ಪ್ರಶ್ನೆ :– ನಮಾಜ್ ಅರಬ್ಬೀ ಭಾಷೆಯಲ್ಲಿಯೇ ಮಾಡಬೇಕು. ಹಾಗೆ ಮಾಡದೇ ಹೋದರೆ ಅವರು ಮುಸ್ಲಿಮ್‌ಎಂದು ಹೇಳಿಕೊಂಡರೂ, ಅವರು ಮಾಡುವುದು ಪ್ರಾರ್ಥನೆಯಾಗಿ ಗುರುತಿಸಲ್ಪಡುವುದಿಲ್ಲ ಎಂದು ಹೇಳುತ್ತಿದ್ದಾರೆ. ನಮಾಜನ್ನು ಇತರ ಭಾಷೆಗಳಲ್ಲಿ ಮಾಡಬಾರದಾ? ಅರಬ್ಬೀ ಭಾಷೆಯಲ್ಲಿಯೇ ಮಾಡಬೇಕಾ? ಇದಕ್ಕೆ ನಿಮ್ಮ ಉತ್ತರ ಹೇಳಿರಿ?**

**ಉತ್ತರ :–** ನಮಾಜ್ ಎಂದರೇ ಸಾವುಹುಟ್ಟುಗಳು ಇಲ್ಲದ ಪರಲೋಕ ಬೇಕೆಂದು ಅರ್ಥಿಸುವುದನ್ನು ಪ್ರಾರ್ಥನೆ (ನಮಾಜ್) ಎಂದು ಹೇಳಬಹುದು. ನಮಾಜ್ ಎನ್ನುವ ಪದವು ವಾಸ್ತವವಾಗಿ ತೆಲುಗು ಪದವಾಗಿದೆ. 'ನಮಾಜ್' ಎಂಬ ಪದದಲ್ಲಿನ ಅರ್ಥದ ಪ್ರಕಾರ ಪ್ರಾರ್ಥನೆ ಮಾಡುವ ಮನುಷ್ಯ ಮರಣಿಸಿದ ನಂತರ ತಿರುಗಿ ಹುಟ್ಟದೇ ದೇವರಲ್ಲಿ ಐಕ್ಯವಾಗಿ ಹೋಗಬೇಕೆನ್ನುವುದೇ ಮುಖ್ಯ ಉದ್ದೇಶವಾಗಿ ಇದೆ. ದೇವರ ಪ್ರಾರ್ಥನೆಯಲ್ಲಿ **'ದೇವರು ಮನುಷ್ಯನ ಭಾವನೆಯನ್ನು ನೋಡುತ್ತಾನೆ ಆದರೆ ಮನುಷ್ಯನ ಭಾಷೆಯನ್ನು ನೋಡುವುದಿಲ್ಲ'** ಎಂದು ಮೊದಲೇ

ಹೇಳಿಕೊಂಡಿದ್ದೇವೆ. ದೇವರ ಸೃಷ್ಠಿಯಲ್ಲಿ ಪಾಲಿಸಲ್ಪಡುವವರು, ಪಾಲಿಸುವವರು ಎರಡು ವಿಧಗಳಿದ್ದಾರೆ. ಈ ಎರಡು ಜಾತಿಗಳನ್ನು ಸೃಷ್ಠಿಸಿರುವವನು ದೇವರು, ನಡೆಸುವವನು ಆತ್ಮವಾಗಿ ಇದ್ದಾರೆ. ಇದರಲ್ಲಿ ಪಾಲಿಸಲ್ಪಡುವವರಿಗೇ ಭಾಷೆಗಳು ಉಪಯೋಗಪಡುತ್ತಿವೆ. ಪಾಲಿಸುವವರು ಭಾಷೆಯಲ್ಲಿನ ಭಾವನೆಯನ್ನು ಗ್ರಹಿಸುತ್ತಿದ್ದಾರೆ. ಯಾವ ಭಾಷೆಯಲ್ಲಾದರೂ ಮಾತನಾಡುತ್ತಿದ್ದಾರೆ. ಇಬ್ಬರನ್ನೂ ಸೃಷ್ಠಿಸಿರುವ ದೇವರು, ಇಬ್ಬರನ್ನೂ ನಡೆಸುವ ಆತ್ಮ ಭಾಷೆಯೊಂದಿಗೆ ಸಂಬಂಧ ವಿಲ್ಲದೇ ಮನುಷ್ಯ ಶರೀರದಲ್ಲಿನ ಭಾವನೆಯನ್ನು ನೇರವಾಗಿ ಗ್ರಹಿ ಸುತ್ತಿದ್ದಾರೆ. ಆದ್ದರಿಂದ ದೇವರ ಬಗ್ಗೆ ಮಾಡುವ ಪ್ರಾರ್ಥನೆ ಯಾವ ಭಾಷೆಯಲ್ಲಿದ್ದರೂ ದೇವರು ಭಾಷೆಯೊಂದಿಗೆ ಕೆಲಸವಿಲ್ಲದೇ ಮನುಷ್ಯನ ಹೃದಯಾಂತರಾಳದಲ್ಲಿನ ಭಾವನೆಯನ್ನು ಗ್ರಹಿಸುತ್ತಿದ್ದಾನೆ. ಇದನ್ನನುಸರಿಸಿ ಯಾವ ಪ್ರಾರ್ಥನೆಯನ್ನಾದರೂ, ಯಾವ ಭಾಷೆಯಲ್ಲಾದರೂ ಮಾಡಬಹುದು. ಮೂರು ದೈವಗ್ರಂಥಗಳಲ್ಲಿಯೂ ಕೂಡಾ ಪ್ರಾರ್ಥನೆ ಇಂತಹ ಭಾಷೆಯಲ್ಲಿಯೇ ಮಾಡಬೇಕೆಂದು ಎಲ್ಲೂ ಬರೆದಿಲ್ಲ.

ದೇವರು ಹೇಳದಿರುವ ವಿಷಯದಲ್ಲಿ ಸ್ವಂತ ನಿರ್ಣಯಗಳು ತೆಗೆದುಕೊಂಡು, ಇಂತಹ ಭಾಷೆಯಲ್ಲಿಯೇ ಪ್ರಾರ್ಥನೆ ಮಾಡಬೇಕೆಂದು ತಮ್ಮ ಸ್ವಂತ ಭಾವನೆಯನ್ನು ಹೇಳುವವರು, ಇತರರಿಗೆ 'ನಿಮಗೆ ಇಷ್ಟವಾದ ಸ್ವಂತ ನಿರ್ಣಯಗಳು ತೆಗೆದುಕೊಳ್ಳುವುದು ತಪ್ಪು' ಎಂದು ಹೇಳುವುದು 'ಗುಲಗಂಜಿ' ನೀತಿಯಂತೆ ಇದೆ. ಅದೇ ಮಾತನ್ನು ತಿರುಗಿಸಿ ಕೇಳಿದರೇ ದೇವರು ಹೇಳದಿದ್ದರೂ ನೀವು ಸ್ವತಃವಾಗಿ ಪ್ರಾರ್ಥನೆಯನ್ನು ಸೃಷ್ಠಿಸಿ, ಪ್ರಾರ್ಥನೆಯನ್ನು ಅರಬ್ಬೀ ಭಾಷೆಯಲ್ಲಿಯೇ ಮಾಡಬೇಕೆಂದು ಕೆಲವರು, ಸಂಸ್ಕೃತದಲ್ಲಿಯೇ ಮಾಡಬೇಕೆಂದು ಕೆಲವರು ಹೇಳುವುದು ಆಶ್ಚರ್ಯವಾಗಿದೆ. ಹಾಗೆ ಒಂದು ಭಾಷೆಯಲ್ಲಿ ಮಾಡುವ ಪ್ರಾರ್ಥನೆಯನ್ನು ಭಾಷೆಗೆ ಕಟ್ಟುಬಿದ್ದ ಪ್ರಾರ್ಥನೆ ಎಂದು ಹೇಳಬಹುದು. ಅಂತಹ ಪ್ರಾರ್ಥನೆಗಳು ದೇವರಿಗೆ ಇಷ್ಟವಿರುವುದಿಲ್ಲ. ಮನುಷ್ಯನಲ್ಲಿ ಭಾವನೆ **'ದೇವರ ಮೇಲೆ ವಿಧೇಯತೆ ಇದ್ದು ಪ್ರಪಂಚ ಸಂಬಂಧ ಆಸೆಗಳು ಇಲ್ಲದೇ, ದೈವದೊಳಗೆ**

ಸೇರಿಹೋಗಬೇಕೆಂದು ಮಾಡುವ ಪ್ರಾರ್ಥನೆ ನಿಜವಾದ ಪ್ರಾರ್ಥನೆ' ಎಂದು ಹೇಳುತ್ತೇವೆ. ನಿಯಮಗಳಿಂದ ಮಾಡುವ ಪ್ರಾರ್ಥನೆಯನ್ನು ದೇವರು ಒಪ್ಪಿಕೊಳ್ಳುವುದಿಲ್ಲ. ಹಾಗೆ ಮಾಡಬೇಕೆಂದು ಎಲ್ಲೂ ಹೇಳದೇನೆ ಮನುಷ್ಯ ಸ್ವಂತ ನಿರ್ಣಯಗಳು ಯಾಕೆ ತೆಗೆದುಕೊಳ್ಳಬೇಕು? ತಾವು ಸ್ವಂತ ನಿರ್ಣಯಗಳು ತೆಗೆದುಕೊಳ್ಳುತ್ತಾ ಇತರರಿಗೆ ನೀತಿ ಹೇಳುವುದು ಯಾಕೆ? ದೇವರನ್ನು ಮನುಷ್ಯರ ಸ್ಥಾಯಿಗೆ ತಗ್ಗಿಸಿ ಇಂತಹ ಭಾಷೆಯನ್ನೇ ದೇವರು ಇಷ್ಟಪಡುತ್ತಾನೆಂದು ಯಾಕೆ ಹೇಳಬೇಕು? ಖುರಾನ್ ಅರಬ್ಬೀಯಲ್ಲಿ ಬರೆದಿರುವುದರಿಂದ ದೇವರಿಗೆ ಅರಬ್ಬೀ ಭಾಷೆ ಮುಖ್ಯವಾದುದೆಂದು ಹೇಳಿದಂತಾದರೇ, ಖುರಾನ್ ತನಗಿಂತಲೂ ಮೊದಲು ಬಂದಿರುವ ಎರಡು ದೈವಗ್ರಂಥಗಳನ್ನು ಸತ್ಯವೆಂದು ದೃಢಪಡಿಸುತ್ತದೆ. ಅದರಲ್ಲಿ ಕೂಡಾ ಜ್ಞಾನಜ್ಯೋತಿ ಇದೆಯೆಂದು ಹೇಳಿದೆ. ಮೊದಲು ಬಂದಿರುವ ಎರಡು ಗ್ರಂಥಗಳು ಕೂಡಾ ದೈವಗ್ರಂಥಗಳೇ, ಹಾಗಿರುವಾಗ ಭಗವದ್ಗೀತೆಯನ್ನು ಬರೆದಿರುವ ಸಂಸ್ಕೃತ ಭಾಷೆ ದೇವರ ಲೆಕ್ಕದಲ್ಲಿ ದೊಡ್ಡದಾಗಿರುತ್ತದೆ. ಭಗವದ್ಗೀತೆಯಲ್ಲಿ ಕೂಡಾ ತನಗೆ ಸಂಸ್ಕೃತ ಭಾಷೆ ಮುಖ್ಯವೆಂದು ದೇವರು ಹೇಳಲಿಲ್ಲ. ಖುರಾನ್‌ನನ್ನು ಬರೆದಿರುವ ಅರಬ್ಬೀ ಭಾಷೆ ದೇವರಿಗೆ ಮುಖ್ಯ ವಾದುದಾದರೇ, ಮೊದಲು ಬಂದಿರುವ ಭಗವದ್ಗೀತೆ ಬರೆಯಲ್ಪಟ್ಟ ಸಂಸ್ಕೃತವು ಕೂಡಾ ದೇವರಿಗೆ ಮುಖ್ಯವಾದುದೇ ಎಂದು ಹೇಳಬಹುದು. ಯಾರೋ ಅಜ್ಞಾನದಿಂದ ಈ ಭಾಷೆ ದೇವರಿಗೆ ಮುಖ್ಯವೆಂದು ಹೇಳಿದರೇ, ಎಲ್ಲರೂ ಆಲೋಚಿಸದೇ ಅದೇ ಹೇಳುವುದು ಮನುಷ್ಯರಿಗೆ ಅಭ್ಯಾಸವಾಗಿ ಹೋಗಿದೆ. ದೇವರಿಗೆ ಭಾಷೆ ಮುಖ್ಯವಲ್ಲ, ಭಾವನೆ ಮುಖ್ಯವೆಂದು ಕೊನೆಯದಾಗಿ ತಿಳಿಸುತ್ತಿದ್ದೇವೆ.

**32) ಪ್ರಶ್ನೆ :– ವ್ಯಕ್ತಿಗತವಾಗಿ ಸಹಪಾಟಿ ಮನುಷ್ಯನನ್ನು ಕೊಲ್ಲುವುದು ತಪ್ಪಾಗುತ್ತದೆ. ಕಾನೂನಿನ ಪ್ರಕಾರ ಮನುಷ್ಯನನ್ನು ಕೊಲ್ಲುವುದು ತಪ್ಪಲ್ಲವೆಂದು ಹೇಳುತ್ತಿದ್ದಾರೆ. ನೀವು ಈ ವಿಷಯದಲ್ಲಿ ಏನು ಹೇಳುತ್ತೀರಿ?**

**ಉತ್ತರ :–** ನಾವು ಈಗ ಮಾತನಾಡುತ್ತಿರುವುದು ಪ್ರಪಂಚ ಸಂಬಂಧ

ವಿಷಯಗಳನ್ನಾ ಅಥವಾ ಆಧ್ಯಾತ್ಮಿಕ ಸಂಬಂಧ ವಿಷಯಗಳನ್ನಾ ಎಂದು ನೋಡಿಕೊಂಡರೇ ದೈವಸಂಬಂಧ ಆಧ್ಯಾತ್ಮಿಕ ಜ್ಞಾನ ವಿಷಯಗಳನ್ನು ಕುರಿತು ಮಾತನಾಡುತ್ತಿದ್ದೇವೆ. ಆದ್ದರಿಂದ ಒಬ್ಬ ಮನುಷ್ಯನನ್ನು ಕೊಲ್ಲುವ ವಿಷಯದಲ್ಲಿ ಪ್ರಪಂಚ ಸಂಬಂಧವಾಗಲ್ಲದೇ ದೈವಸಂಬಂಧವಾಗಿಯೇ ಮಾತನಾಡಿಕೊಳ್ಳಬೇಕು. ಆದ್ದರಿಂದ ಹೊರಗಿನ ಪ್ರಪಂಚದಲ್ಲಿ ವ್ಯಕ್ತಿಗತವಾಗಿ ಒಬ್ಬ ಮನುಷ್ಯನನ್ನು ಹತ್ಯೆ ಮಾಡಿದರೇ ಅದರಲ್ಲಿನ ಹತ್ಯಾ ಪಾಪ ಕೊಂದವನಿಗೇ ಸೇರುತ್ತದೆ. ಪ್ರಪಂಚ ಸಂಬಂಧವಾಗಿ ಹೊರಗಿನ ಕಾನೂನುಗಳ ಪ್ರಕಾರ ಮನುಷ್ಯ ಶಿಕ್ಷೆಯಿಂದ ತಪ್ಪಿಸಿಕೊಳ್ಳಬಹುದು. ಆದರೇ ಮನುಷ್ಯ ಪಾಪದಿಂದ ತಪ್ಪಿಸಿಕೊಳ್ಳಲಾರನು. ನಂತರ ಪಾಪವೊಂದರ ಅನುಭವದಿಂದ ತಪ್ಪಿಸಿಕೊಳ್ಳಲಾರನು. ಹೊರಗಿನ ಕಾನೂನಿನಲ್ಲಿರುವ ಶಿಕ್ಷೆಯಿಂದ ತಪ್ಪಿಸಿಕೊಳ್ಳುವ ಅವಕಾಶವಿದೆ. ಆಧ್ಯಾತ್ಮಿಕಕ್ಕೆ ಸಂಬಂಧಿಸಿದವರೆಗು ಮನುಷ್ಯ ಮಾಡುವ ಕೆಲಸವನ್ನು ಅನುಸರಿಸಿ, ಅವನಲ್ಲಿನ ಭಾವನೆಯನ್ನನುಸರಿಸಿ ಮನುಷ್ಯನಿಗೆ ಪಾಪಪುಣ್ಯಗಳು ಸಂಭವಿಸುತ್ತಿರುತ್ತವೆ. ಬಂದ ಪಾಪ ಪುಣ್ಯಗಳನ್ನು ಮನುಷ್ಯ ಅನುಭವಿಸಬೇಕಾಗಿರುವುದೇ. ಮನುಷ್ಯ ಒಂದು ಕೆಲಸವನ್ನು ಮಾಡಿದರೇ ಆ ಕೆಲಸವನ್ನು ಮಾಡಿಸಿದವನು ಆತ್ಮ. ಜೀವಾತ್ಮಗು, ನಡೆಯುವ ಕೆಲಸಗಳಿಗು ಯಾವ ಸಂಬಂಧ ಇಲ್ಲ. ಆದರೂ ಜೀವಿಯು ಹಾಗೆ ತನಗೆ ಸಂಬಂಧವಿಲ್ಲವೆಂದು ಅಂದುಕೊಳ್ಳುತ್ತಿಲ್ಲ. ತನ್ನ ಭಾವನೆಯಲ್ಲಿ ತಾನೇ ಪ್ರತಿ ಕೆಲಸವನ್ನು ಮಾಡುತ್ತಿದ್ದೇನೆಂದು ಅಂದುಕೊಳ್ಳುವು ದರಿಂದ ಆಯಾ ಕಾರ್ಯಗಳಲ್ಲಿನ ಕರ್ಮಗಳು (ಪಾಪಪುಣ್ಯಗಳು) ಮನುಷ್ಯನನ್ನು ಅಂಟಿಕೊಳ್ಳುತ್ತಿವೆ. ಮಾಡದ ಕೆಲಸವನ್ನು ಮಾಡಿದ್ದೇನೆಂದು ಭಾವನೆಯನ್ನು ಹೊಂದುವುದರಿಂದ ಆತನನ್ನೇ ಕರ್ಮಗಳು (ಪಾಪ) ಸೇರುತ್ತಿವೆ. ಶರೀರದಲ್ಲಿ ಭಾಗವಾಗಿರುವ ಅಹಂ ಹೇಳಿರುವ ಭಾವನೆಯನ್ನು ಜೀವಿಯು ಕೇಳಿ ಹತ್ಯೆಯನ್ನು ನಾನೇ ಮಾಡಿದ್ದೇನೆಂದು ಅಂತರಂಗ ಭಾವದಲ್ಲಿ ಅಂದುಕೊಳ್ಳುವುದರಿಂದ ಭಾವನೆಯನ್ನು ಅನುಸರಿಸಿ ಕರ್ಮಬಂದರೇ, ಕರ್ಮವನ್ನು ಅನುಸರಿಸಿ ಶಿಕ್ಷೆ ಕಷ್ಟಗಳು, ದುಃಖಗಳ ರೂಪದಲ್ಲಿ ಬರುತ್ತವೆ. ಹೊರಗಿನ ಕಾನೂನಿಗೆ ಶಿಕ್ಷೆ ಬೀಳದೇ ತಪ್ಪಿಸಿಕೊಂಡರೂ, ಒಳಗಿನ ದೇವರ ವಿಧಾನಕ್ಕೆ ತಪ್ಪದೆ ಶಿಕ್ಷೆ ಬೀಳುತ್ತದೆ.

ಯಾರೂ ತಪ್ಪಿಸಿಕೊಳ್ಳುವುದಕ್ಕೆ ಅವಕಾಶವಿಲ್ಲ. ಹೊರಗಿನ ಕಾನೂನಿನ ಪ್ರಕಾರ ಒಬ್ಬ ಸೈನಿಕನು ಒಬ್ಬ ದೇಶ ದ್ರೋಹಿಯನ್ನು ಕೊಲ್ಲುವುದು ಅಪರಾಧವಲ್ಲ, ಶಿಕ್ಷೆಯಿಲ್ಲ. ಆದರೂ ಒಳಗಿನ ವಿಧಾನದ ಪ್ರಕಾರ ನೀನು ಕೊಂದಿರುವೆ ಎಂದುಕೊಳ್ಳುತ್ತಿರುವೆ ಆದ್ದರಿಂದ ಪಾಪವು ತಪ್ಪುವುದಿಲ್ಲ, ಶಿಕ್ಷೆ ತಪ್ಪುವುದಿಲ್ಲ. ದೈವಜ್ಞಾನ ತಿಳಿದವನು ಯಾವಾಗಲೂ ಒಳಗಿನ ವಿಧಾನಕ್ಕೆ ಭಯಪಟ್ಟು ಕೆಟ್ಟಭಾವನೆಯನ್ನು ಹೊಂದುವುದಿಲ್ಲ. ದೇವರಿಗೆ ಭಾವನೆಯೇ ಮುಖ್ಯ ಆದ್ದರಿಂದ ಹತ್ಯೆಯನ್ನು ಮಾಡದಿದ್ದರೂ ಹತ್ಯೆ ಮಾಡಿದಹಾಗೆ ಭಾವನೆಯನ್ನು ಹೊಂದಿದ್ದರೂ ಭಾವನೆಯ ಪ್ರಕಾರ ಪಾಪ ಬರುತ್ತದೆ, ಅದರ ಪ್ರಕಾರ ಶಿಕ್ಷೆ ಬರುತ್ತದೆ. ಆದ್ದರಿಂದ ಬೈಬಲ್ ಗ್ರಂಥದಲ್ಲಿ ಒಬ್ಬ ಸ್ತ್ರೀಯನ್ನು ಮೋಹ ನೋಟದಿಂದ (ಕಾಮ ನೋಟದಿಂದ) ನೋಡಿದಂತಾದರೇ ಅವನು ಬಾಹ್ಯವಾಗಿ ವ್ಯಭಿಚಾರ ಮಾಡದಿದ್ದರೂ, ಅಂತರಂಗ ಭಾವನೆಯನ್ನು ಅನುಸರಿಸಿ ಅವನು ವ್ಯಭಿಚಾರ ಮಾಡಿದಂತೆಯೇ ಎಂದು ಮತ್ತಾಯ ಸುವಾರ್ತೆ 5ನೇ ಅಧ್ಯಾಯದಲ್ಲಿ 28ನೇ ವಚನದಲ್ಲಿದೆ. **(ಮತ್ತಾಯ 5-28) "ಒಬ್ಬ ಸ್ತ್ರೀಯನ್ನು ಮೋಹದ ನೋಟದಿಂದ ನೋಡುವ ಪ್ರತಿಯೊಬ್ಬನು ಆಗಲೇ ತನ್ನ ಹೃದಯದಲ್ಲಿ ಆಕೆಯೊಂದಿಗೆ ವ್ಯಭಿಚಾರ ಮಾಡಿದವನಾಗುತ್ತಾನೆ"**.

ದೇವರ ವಿಧಾನದಲ್ಲಿ ಎಲ್ಲಾ ಮಾತುಗಳನ್ನು ಅನುಸರಿಸಿ, ಕೈಗಳನ್ನು ಅನುಸರಿಸಿ ಏನೂ ಪ್ರಾಧಾನ್ಯತೆ ಇಲ್ಲ. ಕೇವಲ ಭಾವನೆಯನ್ನನುಸರಿಸಿ ಮಾತ್ರವೇ ಎಂದು ನಾವು ಹೇಳಿದಂತೆ, ಅನೇಕ ಕಡೆ ಹೇಳಿದ್ದಾರೆ. ವಾಸ್ತವವಾಗಿ ಜೀವಿಯು ಏನೂ ಕೈಲಾಗದವನು, ಜೀವಿಯು ಏನೂ ಮಾಡಲಾರನು. ಶರೀರದಲ್ಲಿನ ಆತ್ಮವೇ ಎಲ್ಲಾ ಕಾರ್ಯಗಳನ್ನು ಅವಯವಗಳ ಮೂಲಕ ಮಾಡಿಸುತ್ತಿದೆ. ಆತ್ಮ ಶಕ್ತಿಯನ್ನು ಕೊಟ್ಟು ಕರ್ಮೇಂದ್ರಿಯಗಳ ಮೂಲಕ, ಜ್ಞಾನೇಂದ್ರಿಯಗಳ ಮೂಲಕ ಕೆಲಸಗಳು ಮಾಡುತ್ತಿರುವಾಗ ಜೀವಿಯು ಅಹಂ ಎಂಬ ಭಾವನೆಯನ್ನು ಹೊಂದಿ ತನಗೆ ಸಂಬಂಧವಿಲ್ಲದ ಕಾರ್ಯಗಳೆಲ್ಲವನ್ನು ತಾನೇ ಮಾಡಿದ್ದೇನೆಂದು ಹೇಳುತ್ತಿದ್ದಾನೆ. ಹಾಗೆ ಹೇಳುವುದರಿಂದ ಜೀವಿಗೆ ಸಂಬಂಧವಿಲ್ಲದ ಪಾಪ

ಬಂದು ಸೇರುತ್ತಿದೆ. ಉದಾಹರಣೆಗೆ ಹೇಳಿದರೇ ವಾಸ್ತವವಾಗಿ ಜೀವಿಯು ಏನೂ ಮಾಡಲಾರದವನು ಎಂದಂತೆ ಏನೂ ನೋಡಲಾರದವನಾಗಿ ಇದ್ದಾನೆ. ಜೀವಿಗೆ ಸ್ವತಃವಾಗಿ ದೃಷ್ಠಿ ಇಲ್ಲ. ಆದ್ದರಿಂದ ಆತನನ್ನು ಕುರುಡನಾಗಿ ಹೇಳಬಹುದು. ಕುರುಡನು ಏನೂ ನೋಡದಿದ್ದರೂ ತಾನು ನೋಡಿದ್ದೇನೆ ಎಂದು ಹೇಳುವುದರಿಂದ ಕುರುಡನಾದ ಜೀವಿಗೆ ಪಾಪ ಬರುತ್ತಿದೆ. ಈ ವಿಧವಾಗಿ ಭಾವನೆಯನ್ನು ಅನುಸರಿಸಿ ಪಾಪ, ಪುಣ್ಯ ಎರಡೂ ಬರುತ್ತಿವೆ. ಈ ಕರ್ಮಗಳಿಂದ ಪುನಃ ಜನ್ಮಗಳು, ಕರ್ಮಗಳು ಬರುತ್ತಿವೆ. ಈ ವಿಷಯವಾಗಿ ಉದಾಹರಣೆಗೆ ಯೋಹಾನ್ ಸುವಾರ್ತೆಯಲ್ಲಿ 9ನೇ ಅಧ್ಯಾಯದಲ್ಲಿ 41ನೇ ವಾಕ್ಯವನ್ನು ನೋಡಿ. (**ಯೋಹಾನ್ 9-41**) **"ನೀವು ಕುರುಡರಾದರೇ ನಿಮಗೆ ಪಾಪ ಇಲ್ಲದೇ ಹೋಗುವುದು ಆದರೇ, ನೋಡುತ್ತಿದ್ದೇವೆಂದು ನೀವೀಗ ಹೇಳುತ್ತಿರುವುದರಿಂದ ನಿಮ್ಮ ಪಾಪವು ನಿಂತಿದೆ ಎಂದು ಹೇಳಿದನು"**.

ಇಲ್ಲಿ ಜೀವಿಯು ಕುರುಡನಾಗಿದ್ದು ನೋಡುತ್ತಿದ್ದೇನೆಂದು ಭಾವಿಸಿ ಹೇಳುವುದರಿಂದ ಅವನಿಗೆ ಪಾಪ ಬರುತ್ತಿದೆ ಎಂದು ಹೇಳುವುದಾಗಿದೆ. ಇದೆಲ್ಲವೂ ಭಾವನೆಯಿಂದಲೇ ಪಾಪಪುಣ್ಯಗಳು ಬರುತ್ತಿವೆ. ಆದ್ದರಿಂದ ವ್ಯಕ್ತಿಗತವಾಗಿ ಒಬ್ಬ ಮನುಷ್ಯನನ್ನು ಕೊಂದರೂ, ಕಾನೂನಿನ ಪ್ರಕಾರ ಕೊಂದರೂ ನಾನು ಕೊಂದಿದ್ದೇನೆ, ನಾನು ಮಾಡಿದ್ದೇನೆ ಎನ್ನುವ ಭಾವನೆಯಿಂದ ಅವನಿಗೆ ಹತ್ಯಾಪಾಪ ಅಂಟಿಕೊಳ್ಳುತ್ತಿದೆ. ಈ ವಿಧವಾಗಿ ನೋಡಿದರೇ ಪಾಪಪುಣ್ಯಗಳು, ಹೊರಗಿನ ಕಾನೂನನ್ನು ಅನುಸರಿಸಿ ಇಲ್ಲ ಆದರೇ ಒಳಗಿನ ದೇವರ ವಿಧಾನವನ್ನು ಅನುಸರಿಸಿ ಇವೆ. ಆದ್ದರಿಂದ ಅಂತರಂಗದಲ್ಲಿರುವ ಶಿಕ್ಷೆಯಿಂದ ಯಾರೂ ತಪ್ಪಿಸಿಕೊಳ್ಳಲಾರರು.

**33) ಪ್ರಶ್ನೆ :– ವ್ಯಕ್ತಿಗತವಾಗಿ ಪ್ರಾರ್ಥನೆ ಮಾತೃಭಾಷೆಯಲ್ಲಿ ಮಾಡಿಕೊಳ್ಳುವುದು ತಪ್ಪಲ್ಲ. ಇಸ್ಲಾಮ್ ಕಾನೂನಿನ ಪ್ರಕಾರ ಪ್ರಾರ್ಥನೆ ಮಾಡದೆ ಹೋಗುವುದು ತಪ್ಪೆಂದು ಅವರು ಹೇಳುತ್ತಿದ್ದಾರೆ. ಇದಕ್ಕೆ ಉತ್ತರ ಹೇಳಿರಿ?**

**ಉತ್ತರ :–** "ಇಸ್ಲಾಮ್ ಕಾನೂನಿನ ಪ್ರಕಾರ ಪ್ರಾರ್ಥನೆ ಮಾಡದೇಹೋಗುವುದು ತಪ್ಪು" ಎನ್ನುವುದೇ ಇಲ್ಲಿ ಮುಖ್ಯವಾದ ಸಾರಾಂಶ ವಾಕ್ಯವಾಗಿದೆ. ದೇವರಿಗೆ ಧರ್ಮಗಳಿವೆ. ಧರ್ಮಗಳ ಪ್ರಕಾರ ದೇವರ ಜ್ಞಾನವಿದೆ. ದೇವರ ವಿಧಾನದಲ್ಲಿ ಒಂದು ಕಾನೂನು ಇದೆಯೆಂದು ಎಲ್ಲೂ ಹೇಳಲಿಲ್ಲ. ದೇವರ ವಿಧಾನವನ್ನು ತಿಳಿಯುವುದಕ್ಕೆ ಶಾಸ್ತ್ರವಿದೆ. ಅದೇ ಆರು ಶಾಸ್ತ್ರಗಳಲ್ಲಿ ದೊಡ್ಡ ಶಾಸ್ತ್ರವಾದ ಬ್ರಹ್ಮವಿದ್ಯಾ ಶಾಸ್ತ್ರ. ದೇವರ ವಿಧಾನವನ್ನು ತಿಳಿಸುವ ಶಾಸ್ತ್ರದಲ್ಲಿ ಶಾಸನಗಳಿರುತ್ತವೆ. ಅವುಗಳನ್ನೇ ಧರ್ಮಗಳೆಂದು ಹೇಳುತ್ತೇವೆ. ಕಾನೂನು ಪ್ರಪಂಚ ಸಂಬಂಧ ವಾದುದು. ಶಾಸ್ತ್ರವು ದೈವ ಸಂಬಂಧವಾದುದು. ದೇವರ ವಿಧಾನದಲ್ಲಿ ಕಾನೂನುಗಳು ಕೆಲಸ ಮಾಡುವುದಿಲ್ಲ. ಅವುಗಳಿಗೆ ಬೆಲೆ ಇರುವುದಿಲ್ಲ. ದೇವರ ಪ್ರಾರ್ಥನೆ ವಿಷಯದಲ್ಲಿ ಇಸ್ಲಾಮ್ ಕಾನೂನು ಒಂದು ವಿಧವಾಗಿ ಹೇಳಿದರೇ, ಹಿಂದೂ ಕಾನೂನು ಒಂದು ವಿಧವಾಗಿ ಹೇಳುತ್ತಿದೆ. ಇಸ್ಲಾಮ್ ಕಾನೂನು ಅರಬ್ಬೀ ಭಾಷೆಯಲ್ಲಿಯೇ ಪ್ರಾರ್ಥನೆ ಮಾಡಬೇಕೆಂದು, ದಿನಕ್ಕೆ ಐದು ಹೊತ್ತು ನಮಾಜ್ ಮಾಡಬೇಕೆಂದು ಹೇಳಿರುವಾಗ, ಹಿಂದೂಗಳು ಕಾನೂನಿನ ಪ್ರಕಾರ ಪ್ರಾರ್ಥನೆ ಸಂಸ್ಕೃತ ಭಾಷೆಯಲ್ಲಿಯೇ ಮಾಡಬೇಕು. ಇಂತಹ ವಸ್ತುಗಳು ಪೂಜಾದ್ರವ್ಯಗಳಾಗಿ ಇಡಬೇಕೆಂದು ಕಾನೂನಿನ ನಿಯಮವಿದೆ. ಈ ವಿಧವಾಗಿ ಒಂದೊಂದು ಮತಕ್ಕೆ ಒಂದೊಂದು ಕಾನೂನು, ಆ ಕಾನೂನಿನಲ್ಲಿ ನಿಯಮ ಗಳಿರುತ್ತವೆ. ಮತಗಳನ್ನೇ ದೇವರು ಕಲ್ಪಿಸದಿರುವಾಗ, ಮನುಷ್ಯರು ಏರ್ಪಡಿಸಿ ಕೊಂಡಿರುವವೇ ಮತಗಳು, ಮತ ಕಾನೂನುಗಳು ಎನ್ನುವವು ಇರುವಾಗ ಮನುಷ್ಯರಿಂದ ತಯಾರಿಸಲ್ಪಟ್ಟಿರುವ ಮತವನ್ನಾಗಲೀ, ಮತ ಕಾನೂನನ್ನಾಗಲೀ ದೇವರು ಯಾಕೆ ಒಪ್ಪಿಕೊಳ್ಳುತ್ತಾನೆ? ದೇವರು ತಾನು ಪ್ರಕಟಿಸಿರುವ ವಿಧಾನದ ಪ್ರಕಾರವೇ ಇರುತ್ತಾನೆ ಆದರೇ, ಇತರರು ಹೇಳಿರುವ ಕಾನೂನಿನ ಪ್ರಕಾರ ಇರುವುದಕ್ಕೆ ಆತನು ರಾಜ್ಯಾಂಗದಲ್ಲಿನ ಪೌರನಲ್ಲ. ದೇವರು ತನ್ನ ವಿಧಾನವನ್ನು ಕುರಿತು, ತನ್ನ ಧರ್ಮಗಳನ್ನು ಕುರಿತು ತನ್ನ ಗ್ರಂಥಗಳಲ್ಲಿ ಹೇಳಿದ್ದಾನೆ. ಪ್ರಾರ್ಥನೆ ವಿಷಯಕ್ಕೆ ಬಂದರೆ ದೇವರನ್ನು ಬಾವನೆಯಿಂದಲೇ ಆರಾಧಿಸಬೇಕೆಂದು ಇದೆ ಆದರೇ ಭಾಷೆಯಿಂದ ಆರಾಧಿಸಬೇಕೆಂದು ಎಲ್ಲೂ ಬರೆದಿಟ್ಟಿಲ್ಲ. ಪ್ರಥಮ

ದೈವಗ್ರಂಥ ಭಗವದ್ಗೀತೆಯಲ್ಲಾಗಲೀ, ಮಧ್ಯಮ, ಅಂತಿಮ ದೈವಗ್ರಂಥದಲ್ಲಾಗಲೀ, ತನ್ನನ್ನು ಆರಾಧಿಸುವ ವಿಧಾನವನ್ನು ಹೇಳಿದ್ದಾನೆ. ಆದರೇ ಆ ಪದ್ಧತಿಯನ್ನು ಮನುಷ್ಯರು ತಿಳಿಯಲಾರದೇ ಹೋಗಿದ್ದಾರೆ. ಮೂರು ದೈವ ಗ್ರಂಥಗಳಲ್ಲಿ ಮೂರು ಯೋಗಗಳನ್ನು ಹೇಳಿದ್ದರೂ, ಅವುಗಳ ವಿಧಾನವು ಸ್ವಲ್ಪ ಕೂಡಾ ತಿಳಿಯದೇ ಹೋಗಿದೆ. ಒಂದು ಗ್ರಂಥದಲ್ಲಿ ಹೇಳಿರುವ ವಿಧಾನವೇ ಮತ್ತೊಂದು ಗ್ರಂಥದಲ್ಲಿ ಹೇಳಿದ್ದರೂ, ಭಾಷೆಯಲ್ಲಿ ಸ್ವಲ್ಪ ವ್ಯತ್ಯಾಸ ಇರುವುದರಿಂದ ಭಾವನೆ ಒಂದೇ ಆದರೂ, ಅದನ್ನು ಮನುಷ್ಯರು ಸರಿಯಾಗಿ ಅರ್ಥ ಮಾಡಿಕೊಳ್ಳಲಾರದೇ ಹೋಗಿದ್ದಾರೆಂದು ಹೇಳಬಹುದು.

ಉದಾಹರಣೆಗೆ ಹೇಳಿದರೇ ಭಗವದ್ಗೀತೆಯಲ್ಲಿ ಯಾರ ಭಾವನೆಯಲ್ಲಿ ಅಹಂಕಾರವಿಲ್ಲವೋ ಆತನು ಇತರರನ್ನು ಕೊಂದರೂ, ಅವನು ಕೊಲ್ಲದಂತೇ ಆಗುವನು. ಆತನನ್ನು ಹಂತಕನೆಂದು ಹೇಳಬಾರದು. ಅವನಿಗೆ ಹತ್ಯಾ ಪಾಪ ಬರುವುದಿಲ್ಲ ಎಂದು ಭಗವದ್ಗೀತೆ ಮೋಕ್ಷ ಸನ್ಯಾಸ ಯೋಗದಲ್ಲಿ 17ನೇ ಶ್ಲೋಕದಲ್ಲಿ ಹೇಳಿದ್ದಾರೆ. ಇದು ಕರ್ಮಯೋಗಕ್ಕೆ ಸಂಬಂಧಿಸಿದ ಶ್ಲೋಕ. ಅದೇ ವಿಷಯವನ್ನೇ, ಅದೇ ಕರ್ಮಯೋಗವನ್ನೇ ಬೈಬಲ್‌ನಲ್ಲಿ ಹೇಳಿದಾಗ ಭಾಷೆಯನ್ನು ಬದಲಾಯಿಸಿ ಹೇಳಿರುವುದರಿಂದ ಇದು ಗೀತೆಯಲ್ಲಿ ಹೇಳಿರುವ ವಿಷಯವೇ ಎಂದು ಯಾರೂ ಗುರುತು ಹಿಡಿಯಲಿಲ್ಲ.

**(ಮತ್ತಾಯ 5-28) "ಒಬ್ಬ ಸ್ತ್ರೀಯನ್ನು ಮೋಹದ ನೋಟದಿಂದ ನೋಡುವ ಪ್ರತಿಯೊಬ್ಬನು ಆಗಲೇ ತನ್ನ ಹೃದಯದಲ್ಲಿ ಆಕೆಯೊಂದಿಗೆ ವ್ಯಭಿಚಾರ ಮಾಡಿದವನಾಗುತ್ತಾನೆ"**.

ಇಲ್ಲಿನ ವಾಕ್ಯಕ್ಕೆ ಗೀತೆಯಲ್ಲಿನ ವಾಕ್ಯಕ್ಕೆ ಏನೂ ಸಂಬಂಧವಿಲ್ಲದಹಾಗೆ ಕಾಣಿಸುತ್ತಿದ್ದರೂ, ಎರಡು ಒಂದೇ ಭಾವನೆಯನ್ನು ಹೊಂದಿರುವ ವಾಕ್ಯಗಳೇ. ಎರಡು ವಾಕ್ಯಗಳಲ್ಲಿ ಭಾಷೆ ವ್ಯತ್ಯಾಸವಿದ್ದರೂ ಭಾವನೆ ಒಂದೇ ಇದೆ. ಈ ಕರ್ಮಯೋಗ ವಿಧಾನ ತಿಳಿಯದವನು ಹೊರಗಿನ ಕಾನೂನಿನ ಪ್ರಕಾರ ಹತ್ಯೆ ಮಾಡಿದದರೂ, ಅವನಿಗೆ ಕರ್ಮ ತಪ್ಪುವುದಿಲ್ಲ, ಶಿಕ್ಷೆ ತಪ್ಪುವುದಿಲ್ಲ.

**34) ಪ್ರಶ್ನೆ :– "ನೀವು ಮುಸ್ಲಿಮ್‌ಆಗಿ ಇಸ್ಲಾಮ್ ಒಪ್ಪಿಕೊಂಡಾಗಲೇ ಆ ಕಾನೂನು ನಿಮಗೆ ಅನ್ವಯಿಸುತ್ತದೆ. ಮತ ಸಂಬಂಧ ವಿಷಯದಲ್ಲಿ ನೀವಿರುವಹಾಗೆಯೇ" ಎಂದು ಅವರು ಹೇಳುತ್ತಿದ್ದಾರೆ. ನನಗೆ ತಿಳಿಯದೇನೆ ಜನ್ಮದಲ್ಲಿಯೇ ಮುಸ್ಲೀಮ್ ಕುಟುಂಬದಲ್ಲಿ ಹುಟ್ಟಿದ್ದೇನೆ. ದೊಡ್ಡವನಾದ ನಂತರ ನಾನು ಒಂದು ಮುಸ್ಲೀಮ್ ಎಂದು ತಿಳಿದಿದೆ. ಆದರೇ ನನ್ನಲ್ಲಿ 'ಮತ' ಎನ್ನುವುದು ಮನುಷ್ಯರನ್ನು ಐಕಮತ್ಯವಾಗಿ ಇಲ್ಲದೇ ಸೀಳಿಸಿ ಕಿಚ್ಚಿಡುವುದಕ್ಕೆ ಇದೆ, ದೇವರನ್ನು ತಿಳಿಯುವುದಕ್ಕೆ ಮತದಿಂದ ಕೆಲಸವಿಲ್ಲ ಎಂದು ಅಂದುಕೊಳ್ಳುತ್ತಿದ್ದೆನು. ದೇವರು ಯಾವ ನಿಯಮ ಇಲ್ಲದವನು ಆಗಿರುವುದರಿಂದ ನಿಯಮಗಳಿಂದ ತುಂಬಿರುವ ಮತದಿಂದ ದೇವರು ತಿಳಿದು ಬರುವುದಿಲ್ಲ ಎಂದು ನಾನು ಅಂದುಕೊಳ್ಳುತ್ತಿದ್ದೆನು. ನಾನು ಇಸ್ಲಾಮ್ ಮತದಲ್ಲಿ ಹುಟ್ಟಿದರೂ ನನಗೆ ಮತವ್ಯವಸ್ಥೆ ಮೇಲೆಯೇ ನಂಬಿಕೆ ಹೋಗಿದೆ. ಇದಕ್ಕೆ ಕಾರಣ ಹೊರಗೆ ನಡೆಯುವ ಮತ ಕಲಹಗಳೇ. ನನ್ನ ಮನೋ ಭಾವನೆಗಳು ಬೇರೆ, ನನ್ನ ಮತ ಭಾವನೆಗಳು ಬೇರೆ, ಅಡ್ಡಕತ್ತರಿಯಲ್ಲಿ ಅಡಿಕೆಯಂತೆ ಮಧ್ಯದಲ್ಲಿ ಸಿಲುಕಿಕೊಂಡಿದ್ದೇನೆ. ಈಗ ನಾನೇನು ಮಾಡಬೇಕು?**

**ಉತ್ತರ :–** ನಿನ್ನಹಾಗೆ ಯಾರೂ ಹೊರಗೆ ಹೇಳಿಕೊಳ್ಳಲಿಲ್ಲ ಆದರೇ, ನೀನಿರುವ ಹಾಗೆ ಭೂಮಿಮೇಲೆ ಬಹಳ ಜನರಿದ್ದಾರೆ. ಜನ್ಮದಿಂದ 'ಮತ' ಎಂಬ ಅಂಟು (ಜಿಗಟು) ಅಂಟಿಕೊಂಡಿರುವಾಗ ಅದು ಮನುಷ್ಯ ಸ್ವಾತಂತ್ರ್ಯವನ್ನು ನಾಶ ಮಾಡುತ್ತದೆ. ಮತವು ಪ್ರತಿಯೊಬ್ಬರನ್ನು ತನ್ನ ಅಡಿಯಾಳಾಗಿ ಇರುವಹಾಗೆ ಮಾಡಿಕೊಂಡಿದೆ. ಮತ ಗುಲಾಮರಾದವರು ಕೆಲವರು ಮೇಧಾವಿಗಳಿದ್ದರೂ ಅವರು ಮತದಿಂದ ವಿಚಕ್ಷಣೆ ಕಳೆದುಕೊಂಡು ತಮ್ಮ ಮೇಧಾಶಕ್ತಿಯನ್ನು ವಿಧ್ವಂಸದ ಕಡೆ ತಿರುಗಿಸುತ್ತಿದ್ದಾರೆ. ನಾನೇನು ಮಾಡುತ್ತಿದ್ದೇನೆ ಎಂಬ ವಿಚಕ್ಷಣೆ ಕಳೆದುಕೊಂಡು ಪರಮತವನ್ನು ಇಲ್ಲದೇ ಮಾಡಬೇಕೆಂದು ಅದಕ್ಕೆ ಬೇಕಾಗಿರುವ ವಿಧ್ವಂಸಕ ಕಾರ್ಯಗಳನ್ನು ಮಾಡಲು ತೊಡಗಿದ್ದಾರೆ. ಇದು ಆ ಮತದಲ್ಲಿರುವ ಸಾತ್ವಿಕರಿಗೆ ಸ್ವಲ್ಪವೂ ಇಷ್ಟವಾಗುತ್ತಿಲ್ಲ. ಆದರೂ ಅವರನ್ನು ಮತವೆನ್ನುವುದು ಬಾಯ್ಮುಚ್ಚಿದಂತೆ ಮಾಡಿದೆ. ಮೌನವಾಗಿ ನೋಡುತ್ತಾ ಇರಬೇಕಾಗಿ ಬಂದಿದೆ.

ಪ್ರತಿ ಮನುಷ್ಯ ಜನ್ಮದಿಂದಲೇ ಒಂದು ಮತದಲ್ಲಿದ್ದಾನೆ. ಆ ಮತವು ಹಿಂದೂ ಮತವಾಗಬಹುದು, ಕ್ರೈಸ್ತವ ಮತವಾಗಬಹುದು, ಇಸ್ಲಾಮ್ ಮತವಾಗಬಹುದು. ಹುಟ್ಟಿದಾಗ ಎಲ್ಲರೂ ಮನುಷ್ಯರೇ. ಸ್ವಲ್ಪ ಬುದ್ಧಿ ಬರುವವರೆಗು ಎಲ್ಲರೂ ಅರಿತುಬೆರೆತು ತಿರುಗುತ್ತಾ ಯಾವ ಬೇಧವಿಲ್ಲದೇ ಇರುವ ಮನುಷ್ಯರು, ಸ್ವಲ್ಪ ಬುದ್ಧಿ ಬೆಳೆದು ಯುಕ್ತವಯಸ್ಸು ಬಂದಾಗ ಮನುಷ್ಯನಿಗೆ ಜನ್ಮದಲ್ಲಿಯೇ ಅಂಟಿಕೊಂಡಿರುವ ಮತವು ಮನುಷ್ಯನಲ್ಲಿ ಕಾಣಿಸಿಕೊಳ್ಳಲು ಶುರು ಮಾಡುವುದು. ಆಗಲೇ ಅವರು ಹುಟ್ಟಿರುವ ಕುಟುಂಬವನ್ನು ಅನುಸರಿಸಿ ನಾನು ಹಿಂದೂ, ನಾನು ಕ್ರೈಸ್ತನು, ನಾನು ಮುಸ್ಲಿಮ್‌ನು ಎಂಬ ಭಾವನೆ ಮನುಷ್ಯನಲ್ಲಿ ಬರುತ್ತದೆ. ಆಗಿನಿಂದ ನನ್ನ ದೇವರು, ನನ್ನ ಮತ, ನನ್ನ ಮತವು ಬೇರೆ ಎಂಬ ಭಾವನೆ ಆರಂಭವಾಗುವುದು. ಹೀಗೆ ಹುಟ್ಟಿರುವ ಪ್ರತಿ ಮನುಷ್ಯ ಯಾವುದೋ ಒಂದು ಮತದಲ್ಲಿ ಸಿಲುಕಿಕೊಳ್ಳುತ್ತಿದ್ದಾನೆ. ಕೊನೆಗೆ ಮತದಿಂದ ದೇವರನ್ನು ತಿಳಿಯಲಿಲ್ಲ ಆದರೇ, ಇತರ ಮತ ದ್ವೇಷ ಬೆಳೆಸಿಕೊಂಡು ವಿಧ್ವಂಶ ಕಾರ್ಯಗಳಿಗೆ ಭಾಗಿಯಾಗುವುದು ನಡೆಯುತ್ತಿದೆ.

ನಾನು ಒಂದು ಹಿಂದೂ ಕುಟುಂಬದಲ್ಲಿ ಹುಟ್ಟಿದ್ದೇನೆ. ಅದರಿಂದ ನಾನು ಹೇಳದೇನೆ, ನನಗೆ ತಿಳಿಯದೇನೆ ನಾನು ಹಿಂದೂ ಆಗಿಹೋಗಿದ್ದೇನೆ. ಯುಕ್ತವಯಸ್ಸು ಬರುತ್ತಲೇ ಮತ ಸಂಬಂಧವಾದ ಭಾವನೆಗಳು ಮನುಷ್ಯನಿಗೆ ತಪ್ಪದೇ ಬರುತ್ತವೆ. ಒಂದುವೇಳೆ ಅವನಿಗೆ ಬರದೇ ಹೋದರೂ ಮತ ಸಂಬಂಧವಾಗಿ ಕೆಲವು ಸಂಸ್ಥೆಗಳು ತಯಾರಾಗಿ ಇದ್ದು ಅವು ಮನುಷ್ಯನನ್ನು ಮತದಲ್ಲಿ ಮುಳುಗಿಸಿ ಮೇಲಕ್ಕೆತ್ತುತ್ತಿವೆ. ಆ ಸಂಸ್ಥೆಗಳು ಮನುಷ್ಯನಲ್ಲಿ ಇತರೆ ಮತಗಳ ದ್ವೇಷವನ್ನು ಬೆಳೆಸುತ್ತವೆ. ಕೊನೆಗೆ ಪ್ರಾಣ ಹೋದರೂ ಪರವಾಗಿಲ್ಲ ಮತಕ್ಕಾಗಿ ಹೋರಾಡಬೇಕು ಎಂದು ಅರೆದುಹೊಯ್ಯುತ್ತಿವೆ. ಇಂಥವುಗಳು ಎಲ್ಲಾ ಮತಗಳಲ್ಲಿ ಇವೆ. ಪ್ರಸ್ತುತ ನಾನು ಹಿಂದೂವಾಗಿರುವುದರಿಂದ ಹಿಂದೂಗಳಲ್ಲಿ ಮತರಕ್ಷಣೆ ಸಂಘಗಳು ಕೆಲವು ಏರ್ಪಟ್ಟು ಮುಸ್ಲಿಮ್‌ರಿಗೆ ಅವರು ಸಂಸ್ಥೆಗಳು ಉಗ್ರವಾದವನ್ನು ಅರೆದು ಹೋಯ್ದಂತೆ, ಹಿಂದೂಗಳಲ್ಲಿ

ಕೂಡಾ ಮತರಕ್ಷಣೆ ಹೆಸರಿನಿಂದ ಇತರ ಮತಸ್ಥರನ್ನು ಬೋಧಸದೇ, ಮತವ್ಯಾಪ್ತಿ ಮಾಡದೇ ತಡೆಹಿಡಿಯಬೇಕೆಂದು ಬೋಧಿಸುತ್ತಿವೆ. ಕೊನೆಗೆ ಸ್ವಲ್ಪವಾದರೂ ದೈವಜ್ಞಾನ ತಿಳಿಯದ ಹಿಂದೂ ಸಂಘಗಳವರು ಇತರ ಮತಗಳು ಯಾವುವೋ ಗುರುತು ಹಿಡಿಯದ ಕುರುಡರಾಗಿ ಹಿಂದೂಗಳ ಮೇಲೆ ದಾಳಿ ಮಾಡಿದ ಸಂಘಟನೆಗಳು ಬಹಳ ಇವೆ.

ನನಗೆ ತಿಳಿಯದೇನೆ ನನ್ನ ಸಂಪರ್ಕವಿಲ್ಲದೇನೆ, ನನ್ನ ಇಷ್ಟಾಯಿಷ್ಟಗಳ ಮೇಲೆ ಆಧಾರವಿಲ್ಲದೇ ನಾನು ಹಿಂದೂವಾಗಿ ಕರೆಯಲ್ಪಡುತ್ತಿದ್ದೇನೆ. ನೀನು ಅಡ್ಡಕತ್ತರಿಯಲ್ಲಿ ಸಿಲುಕಿಕೊಂಡಹಾಗೆ ನಾನು ಸಿಲುಕಿಕೊಳ್ಳದೇ ಹೊರಗೆ ಬಂದು ಎಲ್ಲಾ ಮತಗಳು ನನ್ನವೇ ಎಂದು ಹೇಳುತ್ತಿದ್ದೇನೆ. ಮೂರು ಮತಗಳ ಭಾವನೆಗಳನ್ನು ಬಿಟ್ಟು ಮೂರು ಮತ ಗ್ರಂಥಗಳಲ್ಲಿನ ಜ್ಞಾನ ತಿಳಿಯಿರಿ ಎಂದು ಹೇಳುತ್ತಿದ್ದೇನೆ. ಪ್ರತಿ ಮನುಷ್ಯ **ಭಗವದ್ಗೀತೆ, ಬೈಬಲ್, ಖುರಾನ್** ಮೂರು ಗ್ರಂಥಗಳನ್ನು ಸಮಾನವಾಗಿ ಗೌರವಿಸುತ್ತಾ ಪ್ರತಿ ಮನೆಯಲ್ಲೂ ಮೂರು ದೈವಗ್ರಂಥಗಳನ್ನು ಇಟ್ಟುಕೊಂಡು ನೀವು ಓದಿ, ನಿಮ್ಮ ಮಕ್ಕಳನ್ನು ಕೂಡಾ ಓದಿಸಿರೆಂದು ಹೇಳುತ್ತಿದ್ದೇವೆ. ನಾವೇ ಸ್ವತಃವಾಗಿ ಬಹಳಜನರಿಗೆ ಮೂರು ಗ್ರಂಥಗಳನ್ನು ಒದಗಿಸಿ ಕೊಟ್ಟಿದ್ದೇವೆ. ನಾವು ಹೇಳಿದಂತೆ ಬಹಳಜನ ಮೂರು ಗ್ರಂಥಗಳನ್ನು ಓದಿ ಈದಿನ ಎಷ್ಟೋ ಜ್ಞಾನಿಗಳಾಗಿ ಬದಲಾಗಿದ್ದಾರೆ.

ಈ ವಿಧದಲ್ಲಾದರೇ ನಾವೆಲ್ಲರೂ ಮನುಷ್ಯರೇ, ನಮ್ಮೆಲ್ಲರ ತಂದೆ ದೇವರು ಒಬ್ಬನೇ ಎಂದು ತಿಳಿಯಬಲ್ಲೆವು. ಹಾಗೆ ತಿಳಿಯುವುದರಿಂದ ಮನುಷ್ಯರ ಮಧ್ಯೆ ಸ್ವಮತ, ಪರಮತ ಎಂಬ ಬೇಧಗಳು ಹೋಗಿ ಮನುಷ್ಯರೆಲ್ಲರೂ ಏಕ ಕುಟುಂಬವಾಗಿ ಬದಲಾಗಿಹೋಗುವರು. ಹಾಗಲ್ಲದೇ ನಮ್ಮ ಮತ ಕಾನೂನಿನ ಪ್ರಕಾರ ನಾವು ನಡೆದುಕೊಳ್ಳುತ್ತೇವೆ ಎಂದು ಹೇಳಿದರೇ, ಇತರರು ಕೂಡಾ ನಮಗೂ ಮತವಿದೆ, ನಮಗೂ ಮತ ಕಾನೂನು ಇದೆ, ನಾವು ಕೂಡಾ ನಮ್ಮ ಮತ ಕಾನೂನಿನ ಪ್ರಕಾರ ನಡೆದುಕೊಳ್ಳುತ್ತೇವೆಂದು ಹೇಳಬಲ್ಲರು. ನಮ್ಮ ಮತವು ಇತರ ಮತಗಳಿಗಿಂತಲೂ ದೊಡ್ಡದು ಎಂದರೇ, ಉಳಿದ ಮತಗಳವರು ಕೂಡಾ

ಅದೇ ಮಾತೆನ್ನುವುದೇ ಅಲ್ಲದೇ ನಿನ್ನೆ ಮೊನ್ನೆ ಹುಟ್ಟಿರುವ ನಿಮ್ಮ ಮತಗಳಿಗಿಂತಲೂ ಎಲ್ಲವುಗಳಿಗಿಂತ ಮೊದಲು ಹುಟ್ಟಿರುವ ನಮ್ಮ ಮತವೇ ದೊಡ್ಡದೆಂದು ಹಿಂದೂಗಳು ಹೇಳುವುದು ನಡೆಯುತ್ತಿದೆ. ಹಾಗೆಯೇ ನಮ್ಮ ಅರಬ್ಬೀ ಭಾಷೆ ಪವಿತ್ರವಾದುದೆಂದು ಮುಸ್ಲೀಮ್‌ರು ಹೇಳಿದರೇ ನಮ್ಮ ಸಂಸ್ಕೃತ ಭಾಷೆ ಇನ್ನೂ ದೊಡ್ಡದೆಂದು ಹಿಂದೂಗಳು ಹೇಳುತ್ತಾರೆ. ಈ ಮಾತುಗಳಲ್ಲಿ ಎಲ್ಲಿಯೂ ದೈವಜ್ಞಾನವಿಲ್ಲ. ಅದರಿಂದ ಒಬ್ಬರ ಮತದಮೇಲೆ ಮತ್ತೊಂದು ಮತದವರಿಗೆ ದ್ವೇಷ ಭಾಷೆ ಬೆಳೆದು ಹೋಗುವುದು. ಸ್ವಲ್ಪ ಕಾಲಕ್ಕೆ ಅದು ತಾರಕಕ್ಕೆ ಸೇರಿಕೊಂಡು ವಿಧ್ವಂಸಗಳಿಗೆ ದಾರಿ ಮಾಡುತ್ತದೆ. ಇದೆಲ್ಲದಕ್ಕೂ ಕಾರಣ ಮತವೆಂದು ಚೆನ್ನಾಗಿ ಕಾಣಿಸುತ್ತಿದೆ.

ಕಳೆದ ಅನಾಗರಿಕ ಕಾಲದಲ್ಲಿ ಗ್ರಹಿಸುವ ಶಕ್ತಿಯಿಲ್ಲದ ಕಾಲದಲ್ಲಿ ನಮ್ಮ ಹಿರಿಯರು ಮೊರಟಾಗಿ ಬದುಕಿರಬಹುದು. ಆದಿನ ಅವರು ನಂಬಿದವುಗಳನ್ನೇ ಆಧಾರ ಮಾಡಿಕೊಂಡು ಜೀವಿಸಿರಬಹುದು. ಆದರೇ ಈ ದಿನ ಎಷ್ಟೋ ನಾಗರಿಕತೆ ಬೆಳೆದ ಕಾಲವೆಂದು ಎಲ್ಲರಿಗೂ ಗೊತ್ತು. ಮನುಷ್ಯ ಆರ್ಥಿಕವಾಗಿ, ಸಾಮಾಜಿಕವಾಗಿ ಪೂರ್ವಕ್ಕಿಂತಲೂ ಈದಿನ ಎಷ್ಟೋ ಅಭಿವೃದ್ಧಿ ಹೊಂದಿದ್ದಾನೆ. ಪ್ರತಿ ವಿಷಯವನ್ನು ಸಂಪೂರ್ಣವಾಗಿ ಅರ್ಥ ಮಾಡಿಕೊಳ್ಳುತ್ತಿದ್ದಾನೆ. ಆದರೇ ಮತವಿಷಯ ಬಂದಾಗ ಮನುಷ್ಯ ಪೂರ್ತಿ ಬದಲಾಗುತ್ತಿದ್ದಾನೆ. 'ನನ್ನ ಮತ ನನ್ನದು ನಿನ್ನ ಮತ ನಿನ್ನದು' ಎಂದು ಹೇಳುತ್ತಿದ್ದಾನೆ. ಎಲ್ಲ ಮತಗಳ ಉದ್ದೇಶ, ಸಾರಾಂಶ ಒಂದೇ ಎಂದು ಅರ್ಥ ಮಾಡಿಕೊಳ್ಳಲಾರದೇ ಹೋಗುತ್ತಿದ್ದಾನೆ. ಒಂದು ಮತದ ಮೇಲೆ ಮತ್ತೊಂದು ಮತ ಆಧಿಪತ್ಯ ಇರಬೇಕೆಂದು ನೋಡುತ್ತಿದೆ. ನಮ್ಮ ಮತ ಇತರ ಮತಗಳಿಗಿಂತಲೂ ದೊಡ್ಡದೆಂದು ಹೇಳಿಕೊಳ್ಳುವುದಕ್ಕೆ ಮತವನ್ನು ಅಭಿವೃದ್ಧಿ ಮಾಡಬೇಕೆಂಬ ಕೆಟ್ಟ ಆಲೋಚನೆ ಮನುಷ್ಯರಲ್ಲಿ ಸೇರಿದೆ. ಆ ಆಲೋಚನೆ ಪ್ರಕಾರ ಸ್ವಮತ ಪ್ರಚಾರ, ಪರಮತ ದೂಷಣೆ ಮನುಷ್ಯ ಪ್ರಾರಂಭಿಸಿದ್ದಾನೆ. ಕೈಲಾದಷ್ಟು ಮಟ್ಟಿಗೆ ಯಾವುದೋ ಒಂದು ಆಸೆ ತೋರಿಸಿ ನಿನ್ನ ಮತದಲ್ಲಿ ಇಲ್ಲದಿರುವುದು ಈ ಮತದಲ್ಲಿ ಇದೆಯೆಂದು ಹೇಳಿ ನಂಬಿಸಿ

ಮತಗಳನ್ನು ಬದಲಾಯಿಸುತ್ತಿದ್ದಾರೆ. ಹಾಗಿರುವಾಗ ನಮ್ಮ ಮತವು ಕ್ಷೀಣಿಸಿ ಹೋಗುತ್ತಿದೆ ಎಂದು ಹಿಂದೂಗಳು, ಇತರ ಮತಗಳನ್ನು ಬದಲಾಯಿಸಿ ತಮ್ಮ ಮತದಲ್ಲಿ ಸೇರಿಸಿಕೊಳ್ಳಬೇಕೆಂದು ಕ್ರೈಸ್ತರು, ಮುಸ್ಲಿಮ್‌ರು ಒಬ್ಬರ ಮೇಲೆ ಮತ್ತೊಬ್ಬರು ಪೈಪೋಟಿಯಾಗಿ ಕೆಲಸ ಮಾಡುತ್ತಿದ್ದಾರೆ. ಈ ವಿಧಾನದಲ್ಲಿಯೇ ಮತಗಳ ಮಧ್ಯೆ ಘರ್ಷಣೆಗಳು ಏರ್ಪಡುತ್ತಿವೆ. ಅಂತಹ ಘರ್ಷಣೆಗಳೇ ಈದಿನ ಪ್ರಪಂಚ ವ್ಯಾಪ್ತವಾಗಿ ಇವೆ. ಕೊನೆಗೆ ಮಾನವ ಜಾತಿ ವಿನಾಶ ಹೊರತು ಇನ್ನೇನು ಇಲ್ಲ ಅಲ್ಲವೇ! ಈದಿನ ಮೇಧಾವಿಗಳಾಗಿರುವವರು ಸಹಿತ ಮತವ್ಯಾಪ್ತಿಗಾಗಿಯೇ ಕೆಲಸ ಮಾಡುತ್ತಿದ್ದಾರೆ. ಯಾರು ಆಲೋಚಿಸಿದರೂ ಇದು ಒಳ್ಳೆಯದಲ್ಲ.

**35) ಪ್ರಶ್ನೆ :– ಇಲ್ಲಿಯವರೆಗು ಕೆಲವು ಪ್ರಶ್ನೆಗಳನ್ನು ತಿಳಿಸಿದ್ದಾನೆ. ಅವುಗಳಿಗೆ ನೀವು ತಕ್ಕ ವಿಧವಾಗಿ ಉತ್ತರ ನೀಡಿದ್ದೀರಿ. ಇಲ್ಲಿಯ ವರೆಗು ಪ್ರಶ್ನೆಗಳನ್ನು ಕೇಳಿದ ವ್ಯಕ್ತಿ ಜನ್ಮದಿಂದ ಮುಸ್ಲೀಮ್ ಅಲ್ಲದೇ ಹೋದರೂ ಮುಸ್ಲೀಮ್ ಕುಟುಂಬದಲ್ಲಿ ಹುಟ್ಟಿದವರಿಗಿಂತಲೂ ಹೆಚ್ಚು ಇಸ್ಲಾಮ್‌ನ್ನು ಕುರಿತು ಮಾತನಾಡಿದಂತೆ ಕಾಣಿಸುತ್ತಿದೆ. ಜನ್ಮದಿಂದ ಮುಸ್ಲೀಮ್‌ರು ಕೂಡಾ ಇಸ್ಲಾಮ್‌ನ್ನು ಅಷ್ಟಾಗಿ ಪ್ರೇಮಿಸಿಲ್ಲವೇನೋ ಎನಿಸುತ್ತಿದೆ. ಹಿಂದೂ ಮತದಿಂದ ಹೋಗಿ ಮುಸ್ಲಿಮಾಗಿ ತಯಾರಾಗಿ ಇಸ್ಲಾಮ್ ಪರವಾಗಿ ಅಷ್ಟು ಆಳವಾಗಿ ಮಾತನಾಡುತ್ತಿದ್ದಾನೆ ಅಲ್ಲವೇ! ಅಂಥವರಿಗೆ ದೇವರು ಶೀಘ್ರವಾಗಿ ಮೋಕ್ಷವನ್ನು ಕಲ್ಪಿಸುತ್ತಾನಾ, ಅಂದರೇ ಪರಲೋಕ ರಾಜ್ಯದಲ್ಲಿ ಸೇರಿಸಿಕೊಳ್ಳುತ್ತಾನಾ? ಆತನನ್ನು ನೀನು ಯಾಕೆ ಹಿಂದೂ ಮತಬಿಟ್ಟು ಇಸ್ಲಾಮ್‌ನಲ್ಲಿ ಸೇರಿದ್ದೀಯಾ? ಎಂದು ಕೇಳಿದರೇ ಆತನು ಹೀಗೆ ಉತ್ತರ ಹೇಳಿದ್ದಾನೆ. "ನಾನು ಇಸ್ಲಾಮ್ ಸ್ವೀಕರಿಸುವುದಕ್ಕೆ ಹಿಂದೂಮತದಲ್ಲಿನ ಲೋಪಗಳಲ್ಲ. ದೇವರನ್ನು ವಿಶ್ವಾಶಿಸುತ್ತಾ, ಆತನು ಕಳುಹಿಸಿರುವ ಪ್ರವಕ್ತರು ಎಲ್ಲರನ್ನು ವಿಶ್ವಾಶಿಸುತ್ತಾ, ಕೊನೆಯ ದೈವ ಪ್ರವಕ್ತರಾಗಿ ಮುಹಮ್ಮದ್‌ನನ್ನು ವಿಶ್ವಾಶಿಸಿ ಅನುಸರಿಸುತ್ತಿದ್ದೇನೆ" ಎಂದು ಹೇಳುತ್ತಿದ್ದಾನೆ. ಹೀಗೆ ಮತಾಂತರವಾಗುವವರೆಲ್ಲರೂ ಯಾವುದೋ ಒಂದು ಹೇಳುತ್ತಿದ್ದಾರೆ. ಅವರು ಹೇಳುವುದು ಹೇತುಬದ್ಧವಾದ ಉತ್ತರವೇನಾ?**

**ಉತ್ತರ :–** ಆತನು ಅರಬ್ಬೀ ಭಾಷೆಯನ್ನು ಕುರಿತು ಬಹಿರಂಗಪಡಿಸಿರುವ ಪ್ರೇಮವನ್ನು ನೋಡಿ ಈತನು ಅರಬ್ಬೀ ದೇಶ ಮುಸ್ಲಿಮ್ ಎಂದು ಅಂದುಕೊಂಡಿದ್ದೆನು. ಆತನು ಹಿಂದೂಗಳಲ್ಲಿ ಅದೂ ಈ ಪ್ರದೇಶದಲ್ಲಿ ಜನ್ಮಿಸಿದವನಾಗಿ ಇರುತ್ತಾನೆಂದುಕೊಂಡಿದ್ದೇನೆ. ಹಾಗಿರುವಾಗ ಆತನಿಗೆ ಹಿಂದೂಮತವನ್ನು ಬಿಟ್ಟು ಹೋಗುವುದಕ್ಕೆ, ದೇಶ ಭಾಷೆಗಳಲ್ಲಿ ದೊಡ್ಡದಾದ ತೆಲುಗು ಭಾಷೆಯನ್ನು ಅಲ್ಲಗಳೆದು ಇತರ ದೇಶ ಭಾಷೆಯನ್ನು ದೊಡ್ಡದಾಗಿ ಹೇಳುವುದಕ್ಕೆ, ಆತನು ಹೇಳುವ ಕಾರಣಗಳು ಯಾವುವಾದರೂ ಇರಬಹುದು. ಕೆಲವರು ಹಿರಿಯರು ಒಂದು ಗಾದೆ ಹೇಳುತ್ತಿರುತ್ತಾರೆ. "ವ್ಯಭಿಚಾರ ಕಲಿತವಳು ಅಸತ್ಯ ಕಲಿಯುವುದಿಲ್ಲವೇ?" ಎಂದು ಹಾಗೆಯೇ ಯಾರು ಯಾವ ಕೆಲಸವನ್ನು ಮಾಡಿದರೂ ಅದನ್ನು ಸಮರ್ಥಿಸಿಕೊಳ್ಳುವುದಕ್ಕೆ ತಕ್ಕ ದಾರಿಗಳು ಮೊದಲೇ ಹುಡುಕಿಕೊಂಡಿರುತ್ತಾರೆ. ಅಂತಹವರನ್ನು ಯಾವ ಪ್ರಶ್ನೆ ಕೇಳಿದರೂ ಅದಕ್ಕೆ ಯಾವುದೋ ಒಂದು ಉತ್ತರ ಹೇಳುತ್ತಿರುತ್ತಾರೆ. ಹಾಗೆ ಹೇಳಬೇಕೆಂದು ಮೊದಲೇ ತಯಾರಾಗಿರುತ್ತಾರೆ. ಆತನು ಹೇಳಿರುವುದನ್ನು ಅನುಸರಿಸಿ ಆತನನ್ನು ಪ್ರಶ್ನಿಸದೇ ನಾವು ಚರ್ಚಿಸಿಕೊಂಡರೇ ಹತ್ತು ಜನಕ್ಕೆ ಉಪಯೋಗಪಡು ಜ್ಞಾನ ತಿಳಿಯುತ್ತದೆ. ಆದ್ದರಿಂದ ಇಲ್ಲಿ ಸ್ವಲ್ಪ ಚರ್ಚೆ ನಮ್ಮಲ್ಲಿ ನಾವು ನಡೆಸಿಕೊಳ್ಳೋಣ. ಸೃಷ್ಠ ಆದಿಯಲ್ಲಿಯೇ ದೇವರು ಜ್ಞಾನವನ್ನು ಹೇಳಿದ್ದಾನೆ. ಕೆಲವರು ದೇವರ ಜ್ಞಾನವು ನಿನ್ನೆ ಮೊನ್ನೆ ಹುಟ್ಟಿದೆ ಎಂದು ಅಂದುಕೊಳ್ಳುವುದು, ನಿನ್ನೆ ಹುಟ್ಟಿರುವ ಜ್ಞಾನವನ್ನು ನಾನು ಅನುಸರಿಸುತ್ತಿದ್ದೇನೆ ಎನ್ನುವುದರಲ್ಲಿ ಅರ್ಥವಿಲ್ಲ. ಜ್ಞಾನವು ನಿನ್ನೆಯೋ ಮೊನ್ನೆಯೋ ಹುಟ್ಟಲಿಲ್ಲ. ನೀನು ಹುಟ್ಟುವ ಮೊದಲೇ ಜ್ಞಾನವು ಹುಟ್ಟಿದೆ. ನಿನಗೆ ನಿನ್ನೆ ಮೊನ್ನೆ ಜ್ಞಾನ ಬಂದಿದೆ ಎಂದರೇನೋ, ಅಥವಾ ನಿನ್ನೆ ಮೊನ್ನೆ ಜ್ಞಾನ ಅರ್ಥವಾಗಿದೆ ಎಂದರೇನೋ, ಅದೇ ಜ್ಞಾನವೇ ಅಲ್ಲವೇ! ಮೊದಲಿನಿಂದಲು ಭೂಮಿಮೇಲೆ ಇರುವುದೆಂದು, ಮೊದಲು ಇಷ್ಟವಾಗ ದಿರುವುದು ನಂತರ ಹೇಗೆ ಇಷ್ಟವಾಗಿದೆ ಎಂದು ಪ್ರಶ್ನೆ ಬರಬಹುದು. ಅದಕ್ಕೆ ಅವರಬಳಿ ಉತ್ತರ ಇರುವುದಿಲ್ಲ ಯಾವುದೋ ಒಂದು ಹೇಳಿದರೂ ಅದು ಸರಿಯಾದ ಉತ್ತರವಾಗಿ ಇರುವುದಿಲ್ಲ.

**36) ಪ್ರಶ್ನೆ :– ನಮಾಜ್ (ಪ್ರಾರ್ಥನೆ) ಸಂಬಂಧಪಟ್ಟವರೆಗು ವಿಶ್ವಾಸದಿಂದ ಕೂಡಿರುವ ಶಾರೀರಕ ಭಾಷೆಯೆಂದು ಹೇಳಬಹುದು. ನಮಾಜ್ ಆಚರಿಸಿದಂತೆಲ್ಲಾ ಉಳಿದ ವಿಷಯಗಳ ಅರ್ಥ ಕೂಡಾ ತಿಳಿಯುತ್ತದೆ. ಮಾನವರೆಲ್ಲರೂ ಒಂದೇ, ಎಲ್ಲರೂ ಸಮಾನವೆಂದು ತಿಳಿಸುವುದೇ "ಇಸ್ಲಾಮ್" ಲಕ್ಷ್ಯ. ಪ್ರತಿ ವಿಷಯದಲ್ಲಿ ಸರ್ವಮಾನವರಿಗೆ ಸಾಮಾನ್ಯವಾಗಿ ಕಾಣಿಸುವ ಆಚರಣೆ, ಅಭ್ಯಾಸಗಳು, ಕ್ರಮಶಿಕ್ಷಣ, ಬೋಧನೆ ಬಹಳ ವಿಷಯಗಳು ಸಂಬಂಧಪಟ್ಟಿವೆ. ಮುಸಲ್ಮಾನ್ ಒಬ್ಬನೇ ಪ್ರಪಂಚ ಪೌರನಾಗಿ ಕಾಣಿಸುತ್ತಾನೆ. ಎಲ್ಲರ ಅರ್ಚನೆ ಒಂದೇ ರೀತಿಯಾಗಿ ಇರುತ್ತದೆ. 1) ಕಲಿಮ ಕಾಮನ್ 2) ಅಜಾ ಕಾಮನ್ 3) ನಮಾಜ್ ಕಾಮನ್ 4) ರೋಜಾ ಕಾಮನ್ 5) ಸಲಾಮ್ ಕಾಮನ್ 6) ದಸ್ತಾರ್ ಕಾಮನ್ 7) ನೇಮ್ಸ ಕಾಮನ್ 8) ಡ್ರಸ್ಕೋಡ್ ಕಾಮನ್ 9) ಈದ್ ಕಾಮನ್ ಹೀಗೆ ಹೇಳಿಕೊಳ್ಳುತ್ತಾ ಹೋದರೇ ಬಹಳ ಇವೆ. ಹಾದೀಸ್, ಖುರಾನ್ ಪ್ರಪಂಚ ಭಾಷೆಗಳಲ್ಲಿ ಅನುವಾದಿಸಲ್ಪಟ್ಟಿವೆ. ನಮಗೆ ಬೇಕಾಗಿರುವ ಭಾಷೆಯಲ್ಲಿ ಓದಿಕೊಳ್ಳಬಹುದು. ತಪ್ಪುಗಳಿದ್ದರೇ ಅಲ್ಲಾಹ್ ನನ್ನನ್ನು ಕ್ಷಮಿಸಬೇಕು. (ಪ್ರಪಂಚ ಶಾರೀರಿಕ ಭಾಷೆ ಶಾಸ್ತ್ರಜ್ಞರ ಪರಿಶೋಧನೆ ತಿಳಿದುಕೊಂಡರೇ ಚೆನ್ನಾಗಿರುತ್ತದೆ.) ಈ ವಿಧವಾಗಿ ಮತ್ತೊಂದು ವ್ಯಕ್ತಿ ಹೇಳುತ್ತಿದ್ದಾನೆ. ಇದಕ್ಕೆ ನಿಮ್ಮ ಸ್ಪಂದನೆ ಏನು?**

**ಉತ್ತರ :–** ಅವರು ಮಾತನಾಡುವ ಪ್ರತಿ ಮಾತಿಗೂ ನನ್ನ ಉತ್ತರ ವಿರುದ್ಧವಾಗಿ ಕಾಣಿಸುತ್ತಾ ಇರುತ್ತದೆ. ಹಾಗೆಂದು ವಿರುದ್ಧವಾಗಿ ಹೇಳುವುದೇ ನನ್ನ ಕೆಲಸವೆಂದು ನೀವು ಅಂದುಕೊಳ್ಳಬೇಡಿ. ಬ್ರಹ್ಮವಿದ್ಯಾ ಶಾಸ್ತ್ರಕ್ಕೆ ವಿರುದ್ಧವಾಗಿರುವುದನ್ನು ತಪ್ಪದೇ ಹೇಳಬೇಕಾಗಿರುತ್ತದೆ. ಮನುಷ್ಯ 'ತನ್ನ ಇಷ್ಟಬಂದದ್ದನ್ನು ದೇವರು' ಅಂದುಕೊಂಡಷ್ಟು ಮಾತ್ರಕ್ಕೆ ಅದು ದೇವರಲ್ಲ. ಆ ವಿಷಯವನ್ನು ಇತರರು ಹೇಳಿದರೂ "ಅವರು ಅಸೂಯೆಯಿಂದ ಹೇಳುತ್ತಿದ್ದಾರೆ. ನಮ್ಮ ಮಾತೇ ಸತ್ಯ" ಎನ್ನುವವರು ಕೂಡಾ ಇರಬಹುದು. ಆದ್ದರಿಂದ ಜ್ಞಾನಮಾರ್ಗದಲ್ಲಿ ಯಾವ ವಿಷಯವನ್ನಾದರೂ ನಿರ್ಣಯಿಸಿ ಹೇಳುವುದಕ್ಕೆ ದೇವರು ಒಂದು ಶಾಸ್ತ್ರವನ್ನು ಕೊಟ್ಟಿದ್ದಾನೆ. ಅದನ್ನೇ ಬ್ರಹ್ಮವಿದ್ಯಾ ಶಾಸ್ತ್ರವೆಂದು ಹೇಳುತ್ತಿದ್ದೇವೆ. ಅದು ಆಧ್ಯಾತ್ಮಿಕ

ವಿಷಯಗಳೆಲ್ಲವನ್ನು ನಿರ್ಣಯಿಸಿ ಹೇಳುವ **ಒರೆಗಲ್ಲಾಗಿ** ಇದೆ. ಶಾಸ್ತ್ರಗಳು ಒಟ್ಟು ಆರಾಗಿರುವಾಗ, ಅದರಲ್ಲಿ ಐದು ಪ್ರಪಂಚ ಸಂಬಂಧವಾದವುಗಳಾದರೆ ಒಂದು ಮಾತ್ರ ದೇವರ ವಿಷಯಗಳಿಗೆ ಸಂಬಂಧಿಸಿರುವುದು. ಅದನ್ನು ದೊಡ್ಡ ವಿದ್ಯಾಶಾಸ್ತ್ರವೆಂದು ಕೂಡಾ ಹೇಳುತ್ತಾರೆ. ಬ್ರಹ್ಮ ಎಂದರೇ ದೊಡ್ಡದೆಂದು ಅರ್ಥ. ಎಲ್ಲದರಲ್ಲು ದೊಡ್ಡದು ದೇವರೇ ಆಗಿರುವುದರಿಂದ ಅದನ್ನು ದೇವರ ವಿದ್ಯಾ ಶಾಸ್ತ್ರವೆಂದು ಕೂಡಾ ಹೇಳುತ್ತಿರುತ್ತಾರೆ. ದೇವರ ಜ್ಞಾನವನ್ನು ಪ್ರತಿ ಮನುಷ್ಯ ಕಲಿಯಬೇಕಾಗಿರುವುದಾಗಿ ಇರುವುದರಿಂದ ಅದನ್ನು 'ವಿದ್ಯೆ' ಎಂದು ಹೇಳುತ್ತಿದ್ದೇವೆ. ದೇವರ ವಿದ್ಯೆಯನ್ನು ನಿರ್ಣಯಿಸಿ ಹೇಳುವುದು ಬ್ರಹ್ಮವಿದ್ಯಾಶಾಸ್ತ್ರ.

ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ ಮೇಲೆ ಹೇಳಿರುವ ಸಮಾಚಾರದಲ್ಲಿ ಮುಸ್ಲೀಮ್ ಮಾತ್ರವೇ ಪ್ರಪಂಚ ಪೌರನಾಗಿ ಇದ್ದಾನೆ. ಮುಸ್ಲಿಮ್ ಧರಿಸುವ ವಸ್ತ್ರಗಳಲ್ಲಾಗಲೀ, ಮಾತನಾಡುವ ಭಾಷೆಯಲ್ಲಾಗಲೀ, ಮಾಡುವ ಆಚರಣೆಯಲ್ಲಾ ಗಲೀ ಎಲ್ಲದರಲ್ಲು ಮುಸ್ಲಿಮ್‌ರೆಲ್ಲರೂ ಸಮಾನವಾಗಿ ಇರುವುದರಿಂದ, ಉಳಿದವರು ಯಾರೂ ಹಾಗಿಲ್ಲದಿರುವುದರಿಂದ, ಮುಸ್ಲಿಮ್‌ರು ಹೆಚ್ಚು, ಉಳಿದವರು ಕಡಿಮೆ ಎಂದು ಹೇಳುವುದಕ್ಕೆ ಅವಕಾಶವಿಲ್ಲ. ಇವೆಲ್ಲವೂ ಮೇಲ್ನೋಟಕ್ಕೆ ಕಾಣಿಸುವ ವಿಧಾನಗಳೆ ಆಗಿರುವುದರಿಂದ ಅವೆಲ್ಲವೂ ದೇವರಿಗೆ ಸಂಬಂಧಿಸಿರುವವೆಂದು ಹೇಳಲಾರೆವು. ಇವೆಲ್ಲವೂ ಕ್ರಮಶಿಕ್ಷಣಕ್ಕೆ ಗುರುತುಗಳಾಗಿ ಕಾಣಿಸುತ್ತಿವೆ. ದೈವಿಕಜ್ಞಾನವು ಎಲ್ಲವೂ ಶರೀರದೊಳಗೆ ಸಂಬಂಧಿಸಿರುವುದೆಂದು ಹೇಳಬಹುದು. ಹೊರಗೆ ಕಾಣಿಸುವುದು ಆಧ್ಯಾತ್ಮಿಕಕ್ಕೆ ಸಂಬಂಧವಿರುವುದಿಲ್ಲ. ಮುಸ್ಲಿಮ್‌ರೆಲ್ಲರೂ ಒಂದೇ ಡ್ರಸ್ ಧರಿಸಿದರೂ ಉಳಿದ ಆಚರಣೆಗಳಲ್ಲಿ ಎಲ್ಲಾ ಒಂದೇ ವಿಧವಾಗಿದ್ದರೂ ಅವೆಲ್ಲವೂ ದೈವೀಕಕ್ಕೆ ಸಂಬಂಧಿಸಿರುವವೆಂದು ಅನಿಸಿಕೊಳ್ಳುವುದಿಲ್ಲ. ಅವೆಲ್ಲವೂ ಪ್ರಪಂಚ ಕ್ರಮಶಿಕ್ಷಣಕ್ಕೆ ಸಂಬಂಧಿಸಿರುವವೆಂದು ಹೇಳಬಹುದು. ಒಂದೇ ವಸ್ತ್ರ (ಡ್ರಸ್) ಹೊಂದಿರುವ ಮಕ್ಕಳನ್ನು ಶಾಲೆ (ಸ್ಕೂಲ್) ಮಕ್ಕಳೆಂದು ಹೇಳಬಹುದು. ಹಾಗೆಯೇ ಒಂದೇ ಡ್ರಸ್ ಹೊಂದಿದ್ದು, ಒಂದೇ ನಡಿಗೆ ನಡೆಯುವವರನ್ನು ಮಿಲಿಟರೀ ಸೈನಿಕರೆಂದು ಹೇಳಬಹುದು. ಅಷ್ಟೇ

ಹೊರತು ಅವರನ್ನು ಜ್ಞಾನಿಗಳೆಂದು, ದೈವಜ್ಞಾನದೊಂದಿಗೆ ಸಂಬಂಧವಿರುವವರೆಂದು ಹೇಳಲಾರೆವು ಅಲ್ಲವೇ! ದೈವಜ್ಞಾನಕ್ಕೆ ಹೊರಗಿನ ಕ್ರಮಶಿಕ್ಷಣಕ್ಕೆ ಸಂಬಂಧವಿಲ್ಲ. ಹಾಗೆ ಎಲ್ಲರೂ ಒಂದೇ ಆಚರಣೆ ಹೊಂದಿರುವುದನ್ನು ಮಾನವರೆಲ್ಲರೂ ಸಮಾನರೆಂದು ಹೇಳುವ ಗುರುತು ಕೂಡಾ ಅಲ್ಲ. ಹೊರಗಿನ ವಿಷಯಗಳೊಂದಿಗೆ ದೈವಜ್ಞಾನವನ್ನು ಹೋಲಿಸಲಾರೆವು.

ದೈವಗ್ರಂಥಗಳಲ್ಲಿ ದೇವರು ಮನುಷ್ಯರೆಲ್ಲರಿಗೂ ಸಮಾನನೆಂದು ಹೇಳಿದ್ದಾರೆ. ದೇವರು ಹೇಳಿರುವ ಜ್ಞಾನವನ್ನು ತಿಳಿದುಕೊಂಡರೇ ಮನುಷ್ಯರೆಲ್ಲರೂ ಹೇಗೆ ಸಮಾನವಾಗಿದ್ದಾರೋ ತಿಳೀಯುವುದು. ದೇವರ ಜ್ಞಾನದ ಮೂಲಕ ಪ್ರತಿ ಮನುಷ್ಯನ ಶರೀರದಲ್ಲಿರುವ ವಿಧಾನವೆಲ್ಲವೂ ಸಮಾನವಾಗಿ ಇದೆಯೆಂದು ತಿಳಿಯುವುದು. ಜ್ಞಾನದ ಪ್ರಕಾರ ಎಲ್ಲರೂ ಸಮಾನರೇ ಎಂದು ತಿಳಿಯಬೇಕು ಆದರೇ, ಹೊರಗೆ ಡ್ರಸ್‌ಕೋಡನ್ನು ಅನುಸರಿಸಿ ಆಗಲೀ. ತಿಂಡಿಯನ್ನು ಅನುಸರಿಸಿಯಾಗಲೀ, ಮಾತುಗಳನ್ನು ಅನುಸರಿಸಿಯಾಗಲೀ ಎಲ್ಲರೂ ಒಂದೇ ಎಂಬ ಭಾವನೆ ಬರುವುದಿಲ್ಲ. ಶರೀರ ಅಂತರ್ಮುಖ ಜ್ಞಾನ ತಿಳಿಯದೇನೇ ಈದಿನ ಎಲ್ಲಿ ನೋಡಿದರೂ ಮನುಷ್ಯರ ಮಧ್ಯೆ ಕಲಹಗಳು ಹೆಚ್ಚಾಗುತ್ತಿವೆ. ಎಲ್ಲಿ ನೋಡಿದರೂ ನೀನು ಬೇರೆ, ನಾನು ಬೇರೆ ಎಂಬ ಭಾವನೆಯಿಂದ ಇದ್ದಾರೆ. ಮೊದಲಿಗೇ ದೈವಜ್ಞಾನವಿಲ್ಲದಿರುವುದರಿಂದ ಎಲ್ಲ ಅನರ್ಥಗಳು ಏರ್ಪಡುತ್ತಿವೆ. ಮೇಲಿನ ಪ್ರಶ್ನೆಯಲ್ಲಿ ಮುಸ್ಲಿಮ್ ಒಬ್ಬನೇ ಪ್ರಪಂಚ ಪೌರನಾಗಿ ಇದ್ದಾನೆಂದು ಹೇಳುವುದರಿಂದ ಉಳಿದ ಮತಗಳನ್ನು ಹೀಯಾಳಿಸಿ ಮಾತನಾಡಿದಂತಾಗುತ್ತಿದೆ. ಹಾಗೆ ಹೇಳುವುದರಿಂದ ಉಳಿದ ಮತಸ್ಥರು ಕೂಡಾ ಅದೇಮಾತು ಮಾತನಾಡುವ ಅವಕಾಶವಿದೆ. ಹೀಗೆ ಒಂದುಕಡೆ ಚಿಕ್ಕ ಸಮಸ್ಯೆ ಎದುರಾಗಿ ಅದು ಕೊನೆಗೆ ಯುದ್ಧದವರೆಗು ಹೋಗುತ್ತಿದೆ. ಆದ್ದರಿಂದ ಮಾನವರೆಲ್ಲರೂ ಒಂದೇ ಎಂದು ತಿಳಿಯುವುದಕ್ಕೆ ದೇವರು ದೈವಗ್ರಂಥಗಳಲ್ಲಿ ಹೇಳಿರುವ ಜ್ಞಾನವನ್ನು ತಿಳಿಯಬೇಕು. ಯಾವ ಮತದವರು ನಮ್ಮದೆಂದು ಕೊಳ್ಳುವವರ ಮತ ಗ್ರಂಥವನ್ನು ಓದಿ, ನಂತರ ಇತರ ಮತ ಗ್ರಂಥಗಳನ್ನು ಓದುವುದರಿಂದ ಮನುಷ್ಯರ ಮಧ್ಯೆ

ಸಾಮರಸ್ಯ ಏರ್ಪಡುವುದು. ಹಾಗಲ್ಲದೇ ಹೋದರೆ ಎಲ್ಲರೂ ಒಂದೇ ಎಂದು ಮೇಲ್ನೋಟಕ್ಕೆ ಹೇಳುತ್ತಿದ್ದರೂ ಒಳಗೆ ನಾವು ಬೇರೆ ಎಂಬ ಬೇಧಭಾವನೆಯೇ ಇರುತ್ತದೆ. ಅಂತರ್ಮುಖ ಜ್ಞಾನ ತಿಳಿಯುವವರೆಗು ಮನುಷ್ಯನೊಳಗೆ ಇರುವ ಬೇಧಭಾವನೆ ಹೋಗುವುದಿಲ್ಲ. ಆದ್ದರಿಂದ **ಎಲ್ಲದಕ್ಕೂ ಜ್ಞಾನವೇ ಪರಿಷ್ಕಾರ.** ಎಲ್ಲರೂ ಸಮಾನವಾಗಿ ಇರುವುದಕ್ಕೆ, ಎಂತಹ ಅಸೂಯೆ ದ್ವೇಷಗಳಿಲ್ಲದೇ ಮನುಷ್ಯರ ಮಧ್ಯೆ ಪ್ರೇಮಾಭಿಮಾನಗಳು ಉಂಟಾಗುವುದಕ್ಕೆ ತಪ್ಪದೇ ಜ್ಞಾನ ಅವಶ್ಯ. ಜ್ಞಾನವಿಲ್ಲದೆ ಐಕ್ಯಮತ್ಯ, ಸಮಾನತ್ವವು ಸಾಧ್ಯವಿಲ್ಲ. ಮೇಲಿನ ಆಚರಣೆ, ಆರಾಧನೆಯಿಂದ ಮನುಷ್ಯರಲ್ಲಿ ಕ್ರಮಶಿಕ್ಷಣ ಬರುತ್ತದೇನೋ ಆದರೆ 'ಎಲ್ಲರೂ ಸಮಾನ' ಎಂಬ ಭಾವನೆ ಬರುವುದಿಲ್ಲ. ಆದ್ದರಿಂದ ಎಲ್ಲರಿಗೂ ಅಂತರಂಗ ದಲ್ಲಿರುವ ಜ್ಞಾನವೇ ಅವಶ್ಯಕ.

ಇಸ್ಲಾಮ್‌ನ್ನು ಬೋಧಿಸಿರುವುದು ಅಂತಿಮ ದೈವಗ್ರಂಥ ಖುರಾನ್. ಖುರಾನ್ ಗ್ರಂಥ ಮೊದಲು ಬಂದಿರುವ ಗ್ರಂಥಗಳನ್ನು ಸಮರ್ಥಿಸುತ್ತದೆ. ಮೊದಲು ಬಂದಿರುವ ಗ್ರಂಥಗಳಲ್ಲಿನ ಜ್ಞಾನವು ದೊಡ್ಡದೆಂದು ಹೇಳುತ್ತಿದೆ. ಮೊದಲು ಬಂದಿರುವ ಗ್ರಂಥಗಳಲ್ಲಿ **ಜ್ಞಾನಜ್ಯೋತಿ** ಇದೆ ಎಂದು, **ಮಾರ್ಗದರ್ಶಕ** ಇದೆಯೆಂದು ಸೂರಾ ಐದರಲ್ಲಿ ಆಯತ್ 44, 46, 48 ರಲ್ಲಿ ಹೇಳಿರುವ ಮಾತುಗಳು ಆತನಿಗೆ ಕಾಣಿಸಲಿಲ್ಲವಾ? ಹಿಂದೂಮತದಲ್ಲಿ ಹುಟ್ಟಿರುವ ಆತನಿಗೆ ಭಗವದ್ಗೀತೆಯಲ್ಲಿ ಜ್ಞಾನಜ್ಯೋತಿ, ಮಾರ್ಗದರ್ಶಕ ಕಾಣಿಸಲಿಲ್ಲವಾ? ಮೊದಲ ಗ್ರಂಥ, ಎರಡನೆಯ ಗ್ರಂಥದಲ್ಲಿ ಕಾಣಿಸದಿರುವಾಗ ಮೂರನೆಯ ಗ್ರಂಥದಲ್ಲಿ ಹೇಗೆ ಕಾಣಿಸಿದೆ? **(62-5) ರಲ್ಲಿ ತೌರಾತ್ ಗ್ರಂಥವನ್ನು ಅನುಸರಿಸದವನು ಎಷ್ಟು ಗ್ರಂಥಗಳನ್ನು ಅನುಸರಿಸಿದರೂ ಗ್ರಂಥಗಳನ್ನು ಹೊರುವ ಕತ್ತೆಯೊಂದಿಗೆ ಸಮಾನವೆಂದು ಉಪಮಾನವನ್ನು ಕೂಡಾ ಹೇಳಿದ್ದಾರೆ ಅಲ್ಲವೇ! (5-68)ರಲ್ಲಿ ತೌರಾತ್ (ಭಗವದ್ಗೀತೆ), ಇಂಜೀಲು (ಬೈಬಲ್), ಖುರಾನ್‌ಗಳನ್ನು ನಿಮ್ಮ ಜೀವನಗಳಲ್ಲಿ ನೆಲೆಗೊಳಿಸುವವರೆಗೂ ನೀವು ಯಾವ ಧರ್ಮದ ಮೇಲೂ ಇಲ್ಲದಹಾಗೆಯೇ** ಎಂದು ಹೇಳಿದಾಗ ಒಂದು ಗ್ರಂಥವನ್ನು, ಒಂದು ಮತವನ್ನು ಕುರಿತು ಹೇಳುವುದು ದೇವರ ಲೆಕ್ಕದಲ್ಲಿ ತಪ್ಪಲ್ಲವಾ?

ಭಗವದ್ಗೀತೆಯನ್ನು ಕೃಷ್ಣನು ಹೇಳಿದಾಗ ಅರ್ಜುನನು ಕೇಳಿದ್ದಾನೆ. ಅರ್ಜುನನು ಕೇಳಿರುವುದನ್ನು ವ್ಯಾಸನಿಗೆ ಹೇಳಿದಾಗ ವ್ಯಾಸನಿಂದ ಗ್ರಂಥವು ತಯಾರಾಗಿದೆ. ಹಾಗೆಯೇ ಖುರಾನ್‌ನನ್ನು ಜಿಬ್ರಯೇಲ್ ಮುಹಮ್ಮದ್ ಪ್ರವಕ್ತರವರಿಗೆ ಹೇಳಿದನು. ಮುಹಮ್ಮದ್ ಪ್ರವಕ್ತ ಉಳಿದ ಪ್ರಜೆಗಳಿಗೆ ಹೇಳಿದಾಗ, ಉಳಿದ ಪ್ರಜೆಗಳು ಖುರಾನ್‌ನನ್ನು ಬರೆದಿದ್ದಾರೆ. ಇಲ್ಲಿ ಚೆನ್ನಾಗಿ ಗಮನಿಸಿದರೇ ಹೇಳಿರುವವನು ಒಬ್ಬನು, ಕೇಳಿಸಿಕೊಂಡವನು ಒಬ್ಬನು, ಬರೆದಿರುವವನು ಮತ್ತೊಬ್ಬನು. ಭಗವದ್ಗೀತೆಯ ವಿಷಯದಲ್ಲಾಗಲೀ, ಖುರಾನ್ ವಿಷಯದಲ್ಲಾಗಲೀ ಹಾಗೆಯೇ ನಡೆದಿದೆ.

| ಗ್ರಂಥ | ಹೇಳಿರುವವರು | ಕೇಳಿಸಿಕೊಂಡವರು | ಬರೆದಿರುವವರು | ಕಾಲ |
|---|---|---|---|---|
| ಭಗವದ್ಗೀತೆ | ಶ್ರೀಕೃಷ್ಣನು | ಅರ್ಜುನನು | ವ್ಯಾಸನು | ದ್ವಾಪರಯುಗದಲ್ಲಿ |
| ಖುರಾನ್ | ಜಿಬ್ರಯೇಲ್ | ಮುಹಮ್ಮದ್ ಪ್ರವಕ್ತ | ಪ್ರಜೆಗಳು | ಕಲಿಯುಗದಲ್ಲಿ |

ಎರಡು ಗ್ರಂಥಗಳು ಒಂದೇ ವಿಧವಾಗಿ ನಡೆದಾಗ ಭಗವದ್ಗೀತೆಯನ್ನು ಹೇಳಿರುವುದು ಕೃಷ್ಣನಾಗಿರುವಾಗ, ಅರ್ಜುನನು ವಾರ್ತೆಯನ್ನು ಸೇರಿಸಿದವ ನಾಗಿರುವಾಗ, ಆ ವಾರ್ತೆಯನ್ನು ಬರೆದಿರುವವನು ವ್ಯಾಸನಾಗಿದ್ದಾನೆ. ಹಾಗೆಯೇ ಖುರಾನ್ ವಿಷಯದಲ್ಲಿ ಖುರಾನ್ ಜ್ಞಾನವನ್ನು ಹೇಳಿದವನು ಜಿಬ್ರಯೇಲ್ ಆಗಿರುವಾಗ, ಹೇಳಿರುವ ಜ್ಞಾನವನ್ನು ವಾರ್ತೆಯಂತೆ ತೆಗೆದುಕೊಂಡು ಹೋಗಿ ಪ್ರಜೆಗಳಿಗೆ ಕೊಟ್ಟವರು ಮುಹಮ್ಮದ್ ಆದಾಗ, ವಾರ್ತೆಯಾಗಿ ಬಂದಿರುವ ಖುರಾನ್ ಜ್ಞಾನವನ್ನು ಗ್ರಂಥವಾಗಿ ಬರೆದಿರುವವರು ಕೇಳಿಸಿಕೊಂಡಿರುವ ಪ್ರಜೆಗಳೇ. ಈದಿನ ಹಿಂದೂಗಳ ದೃಷ್ಟಿಯಲ್ಲಿ ಭಗವದ್ಗೀತೆ ಯನ್ನು ಹೇಳಿರುವ ಕೃಷ್ಣನು ಜ್ಞಾನಿಯಾಗಿ ಗುರುತಿಸಲ್ಪಟ್ಟಿರುವಾಗ, ಮುಸ್ಲಿಮ್‌ರಿಗೆ ಖುರಾನ್ ಜ್ಞಾನವು ಹೇಳಿರುವ ಜಿಬ್ರಯೇಲ್ ಯಾಕೆ ಜ್ಞಾನಿಯಾಗಿ ಜ್ಞಾನಿಯಾಗಿ ಗುರುತಿಸಲ್ಪಡಲಿಲ್ಲ? ತಿಳುವಳಿಕೆ ಇರುವ ಕೆಲವರ ದೃಷ್ಟಿಯಲ್ಲಾದರೂ ಜಿಬ್ರಯೇಲ್ ಯಾಕೆ ಜ್ಞಾನಿಯಾಗಿ

ಗುರುತಿಗೆ ಬರಲಿಲ್ಲ? ಜ್ಞಾನವಿರುವ ಹಿಂದೂಗಳು ಕೆಲವರು ಕೃಷ್ಣನನ್ನು ಜ್ಞಾನಿಯಾಗಿ ಗುರುತಿಸಿ, ಪರಮಾತ್ಮನನ್ನು ದೇವರಾಗಿ ಆರಾಧಿ ಸುತ್ತಿದ್ದಾರೆ. ಮುಸ್ಲಿಮ್‌ರೊಳಗೆ ಬಂದು ನೋಡಿದರೇ ಪರಮಾತ್ಮ (ಅಲ್ಲಾಹ್) ಆದವನನ್ನು ದೇವರಾಗಿ ಆರಾಧಿಸುತ್ತಾ ಅನ್ಯದೇವತಾರಾಧನೆ ಮಾಡುತ್ತಿಲ್ಲ. ಅದು ಸರಿಯಾದ ಪದ್ಧತಿ. ಆದರೇ ಜಿಬ್ರಯೇಲ್‌ನನ್ನು ಸ್ವಲ್ಪವಾದರೂ ಜ್ಞಾನಿಯಾಗಿ ಗುರುತಿಸಲಿಲ್ಲ. ಇಲ್ಲಿ ಜಿಬ್ರಯೇಲ್‌ಗೆ ಯಾಕೆ ಮುಸ್ಲಿಮ್‌ರಲ್ಲಿ ಹೆಗಳಿಕೆ ಇಲ್ಲ? ಎಂಬ ಪ್ರಶ್ನೆಗೆ ಉತ್ತರ ಇಲ್ಲ. ನಿಜಾಯಿತಿಯಾಗಿ ಮಾತನಾಡಿದರೇ ಅನ್ನ ಇಟ್ಟವನನ್ನು ಮರೆತುಹೋಗಬಾರದು. ಏಕೆಂದರೇ! ಆತನು ಮನುಷ್ಯನಿಗಿರುವ ಹಸಿವು ತೀರಿಸಿದ್ದಾನೆ. ಹಾಗೆಯೇ ಜ್ಞಾನ ಕೊಟ್ಟವನನ್ನು ಮರೆಯಬಾರದು. ಏಕೆಂದರೇ! ಆತನು ನಮ್ಮ ಜೀವನಕ್ಕೆ ಅಗತ್ಯವಾದ ಜ್ಞಾನವನ್ನು ಕೊಟ್ಟಿದ್ದಾನೆ. ಹಾಗಲ್ಲದೇ ಅನ್ನ ಇಟ್ಟವನನ್ನು ಮರೆತುಹೋಗಿ ಎಲೆಯನ್ನು ಕೊಟ್ಟವನನ್ನು ಜ್ಞಾಪಕ ಇಟ್ಟುಕೊಂಡರೇ ಅದು ಒಳ್ಳೆಯದಲ್ಲ ಎಂದು ಯಾರಾದರೂ ಹೇಳಬಹುದು. ಅದೇ ವಿಧವಾಗಿ ಮೃತನಾಗಿರುವ ಮನುಷ್ಯನಿಗೆ ಜೀವವಿರುವ ಜ್ಞಾನವನ್ನು ಕೊಟ್ಟಿರುವ ಜಿಬ್ರಯೇಲ್‌ನನ್ನು ಮರೆತುಹೋಗುವುದು ಒಳ್ಳೆಯದಲ್ಲವೆಂದು ಹೇಳಬಹುದು. ಯಾರಾದರೂ ಹಾಗೆ ಮಾಡಿದರೂ ಅದು ತಪ್ಪೆಂದು ಹೇಳದೇ ಹೋಗುವುದು ಮತ್ತಷ್ಟು ತಪ್ಪು. ಆದರೇ ಈದಿನ ಸ್ವಾರ್ಥ ಪೂರಿತ ಮನುಷ್ಯರು ತಪ್ಪು ಒಪ್ಪುಗಳನ್ನು ನೋಡದೇ ಎಲ್ಲರೂ ಯಾವುದನ್ನು ಮಾತನಾಡಿದರೇ ಅದನ್ನೇ ಮಾತನಾಡುತ್ತಿದ್ದಾರೆ. ಇಲ್ಲಿನವರೆಗು ನೀನು ಪ್ರಶ್ನೆಗಳಾಗಿ ಕೇಳಿರುವ ವ್ಯಕ್ತಿ ಮೂಲಗಳನ್ನು ನೋಡಿದಾಗಲೇ ಆತನು ಎಷ್ಟು ದೊಡ್ಡ ಜ್ಞಾನ ಇರುವವನೋ ಅರ್ಥವಾಗಿದೆ. ಆತನು ಮತ ಬದಲಾವಣೆಯಲ್ಲಿ ಬರೆದ ವಿಧಾನವನ್ನು ನೋಡಿದಾಗಲೇ ಅರ್ಥವಾಗಿದೆ. ಆತನು ದೇವರು ಕಳುಹಿಸಿರುವ ಪ್ರವಕ್ತರನ್ನು ವಿಶ್ವಾಶಿಸುತ್ತಾ ಕೊನೆಯ ಪ್ರವಕ್ತನನ್ನು ವಿಶ್ವಾಶಿಸುತ್ತಿದ್ದಾನೆ ಎಂದಿದ್ದಾನೆ. ಪ್ರವಕ್ತರಿಗಿಂತಲೂ ದೊಡ್ಡವನು ಪ್ರವಕ್ತರಿಗೆ ಜ್ಞಾನವನ್ನು ಕೊಟ್ಟಿರುವ ಅಲ್ಲಾಹ್‌ನನ್ನು ಆತನು ಮರೆತುಹೋಗಿದ್ದಾನೆ. ಅಲ್ಲಾಹ್‌ನನ್ನು ಕುರಿತು ಒಂದುಮಾತು ಕೂಡಾ

ಹೇಳದೇ ಪ್ರವಕ್ತರನ್ನು ಕುರಿತು ಹೇಳುವುದರಿಂದ, ಭಗವದ್ಗೀತೆ ವಿಷಯದಲ್ಲಿ ಕೃಷ್ಣನನ್ನು ಬಿಟ್ಟು ಅರ್ಜುನನನ್ನು ಹಿಡಿದುಕೊಂಡಹಾಗೆ ಕಾಣಿಸುತ್ತಿದೆ. ನಡೆದುಹೋಗಿರುವುದನ್ನು ಕುರಿತು ಅಂದುಕೊಳ್ಳುವುದಕ್ಕಿಂತಲೂ ನಡೆಯ ಬೇಕಾಗಿರುವುದನ್ನು ಕುರಿತು ಹೇಳಿಕೊಳ್ಳುವುದು ಒಳ್ಳೆಯದು. ಇಂದಿಗಾದರೂ ಮಧ್ಯವರ್ತಿಗಳಾದವರನ್ನು ಬಿಟ್ಟು ನೇರವಾಗಿ ಅಲ್ಲಾಹ್‌ನನ್ನು ಆಶ್ರಯಿಸಿರೆಂದು ನನ್ನ ಸಲುವಾಗಿ ತಿಳಿಸುತ್ತಾ ಇಲ್ಲಿಗೆ ಮುಗಿಸುತ್ತಿದ್ದೇನೆ.

## ಮುಕ್ತಾಯ

**ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅಗತ್ಯವೋ, ಹಾಗೆಯೇ ಒಂದು ವಿಷಯವನ್ನು ಖಂಡಿಸುವುದಕ್ಕೆ ಶಾಸ್ತ್ರ ಅಷ್ಟೇ ಅಗತ್ಯವಾಗುತ್ತದೆ.**

**ಅಸತ್ಯವನ್ನು ಸಾವಿರ ಜನ ಹೇಳಿದರೂ, ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರ ಜನ ಅಲ್ಲಗಳೆದರೂ, ಅದು ಅಸತ್ಯವಲ್ಲ.**

**1. ತಿಳಿಯದ ಆಕಾಶ ಒಂದಾಗಿದ್ದು**
**ತಿಳಿಯುವ ಸೂರ್ಯ, ಚಂದ್ರ,**
**ನಕ್ಷತ್ರಗಳು ಮೂರು (ತ್ರೈತ) ಇವೆ.**

**2. ತಿಳಿಯದ ಕಾಲ ಒಂದಾಗಿದ್ದು**
**ತಿಳಿಯುವ ದಿನ, ಮಾಸ, ಸಂವತ್ಸರ**
**ಮೂರು (ತ್ರೈತ) ಇವೆ.**

**3. ತಿಳಿಯದ ಪರಮಾತ್ಮ ಒಂದಾಗಿದ್ದು**
**ತಿಳಿಯುವ ಅಂಡಜ, ಪಿಂಡಜ,**
**ಉದ್ಭಿಜ ಮೂರು (ತ್ರೈತ) ಇವೆ.**

# ಭಾವನೆ – ಭಾಷೆ

## ಯೋಗೀಶ್ವರರವರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ಪ್ರಕಟನೆಗಳು

